## ಖಾಸಗಿ ಪ್ರಚಾರಕ್ಕಾಗಿ.....


# ಮಾನವಿ

ಸಂಪುಟ ; 1 ಸಂಚಿಕೆ ; 6-7

ನವೆಂಬರ್-ಡಿಸೆಂಬರ್ 1987

**ಸಂಪಾದಕೀಯ ಮಂಡಳಿ**

ಎಚ್. ಎಚ್. ಚಂಪಾವತಿ

ಎಚ್. ಎಸ್. ರಾಜೇಶ್ವರಿ, ವೇದ

**ಸಲಹೆ—ಸಹಕಾರ**

ವಿಜಯಾ

**ವಿಳಾಸ : "ಮಾನವಿ''**
ನಂ. **645/2**-ಎಲ್. ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯರಸ್ತೆ
ಮಾರುತಿ ಸೇವಾನಗರ ಅಂಚೆ
ಬೆಂಗಳೂರು-560 033

**ಸೂಚನೆ :** ವಾರ್ಷಿಕಾ ಚಂದಾ ; **15 ರೂ.**

ಒಂದೇ ವಿಶೇಷ ಸಂಚಿಕೆಯೊಂದಿಗೆ
ಒಟ್ಟು ವಿಳು ಸಂಚಿಕೆಯೊಂದಿಗೆ
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಒ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ......**



## ಸಂಪಾದಕೀಯ

ಮಾರ್ಚ್, 8 ಅಂತರ್‌ರಾಷ್ಟ್ರೀಯ ಮಹಿಳಾ ದಿನ ಹತ್ತಿರವಾಗುತ್ತಿದ್ದಂತೆ ಪ್ರತಿಯೊಂದು ಮಹಿಳಾ ಸಂಘಟನೆಗಳಲ್ಲೂ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಪ್ರಯತ್ನಗಳು ಬಿರುಸಾಗಿ ನಡೆಯುತ್ತಿವೆ. ದುಡಿಯುವ ಮಹಿಳೆಯರ ಚಾರಿತ್ರಿಕ ಹೋರಾಟದ ಸಾಂಕೇತಿಕ ಆಚರಣೆ ಇದು. ಒಂದರ್ಥದಲ್ಲಿ ಮಹಿಳಾ ದಿನಾಚರಣೆ ವರ್ಷವೆಲ್ಲಾ ನಡೆಸಿರುವ ಕಾರ್ಯಕ್ರಮ ಚಟುವಟಿಕೆಗಳ ಕ್ರೋಢೀಕರಣ ಆದರೆ ಸಮಾಜದ ಇತರೆ ಸಂಬಂಧಗಳ ಜೊತೆಗೆ ಹೆಣ್ಣಿನ ಬಗೆಗಿರುವ ಧೋರಣೆ, ಮೌಲ್ಯಗಳು ವ್ಯಕ್ತಿಗತವಾದ ಬದಲಾವಣೆಯನ್ನು ನಿರೀಕ್ಷಿಸುವುದರಿಂದ ಇನ್ನೊಂದು ಅರ್ಥದಲ್ಲಿ ಇದು ಗಂಡು ಹೆಣ್ಣಿನ ದೈನಂದಿನ ಸಂಬಂಧಗಳಲ್ಲಿ ಆಚರಣೆಯಾಗಬೇಕಾಗಿರುವಂತಹದು.

ಇಂದು ಹೆಚ್ಚು ಹೆಚ್ಚು ಸಂಕೀರ್ಣವಾದ ಸಮಸ್ಯೆಗಳು ಮಹಿಳೆಯರ ಮುಂದಿವೆ. ಷಾಬಾನು, ಸತೀ ಪ್ರಕರಣ, ಮತೀಯ ಗಲಭೆ, ಧಾರವಾಡ ಜಿಲ್ಲೆಯ ಸಂಗಮ ದೇವರಕೊಪ್ಪ ಗ್ರಾಮದಲ್ಲಿ ಮಹಿಳೆಯೊಬ್ಬಳ ಮೇಲೆ ನಡೆಸಿದ ದೌರ್ಜನ್ಯ ದಲಿತರ ಮೇಲೆ ನಡೆಯುತ್ತಿರುವ ಅಮಾನುಷ ಕ್ರೌರ್ಯದ ಪ್ರತೀಕಗಳಾದ ಬೆಂಡಿಗೇರಿ ತತ್ತೂರಿನಂತಹ ಘಟನೆಗಳು ನಮ್ಮ ದೇಶದಲ್ಲಿ ಪ್ರಭಲಗೊಳ್ಳುತ್ತಿರುವ ಶಕ್ತಿಗಳನ್ನು ಸೂಚಿಸುತ್ತವೆ.

ಧಾರ್ಮಿಕ ಪುನರುಜ್ಜೀವನ, ಪ್ರಭಲಗೊಳ್ಳುತ್ತಿರುವ ಫ್ಯೂಡಲ್ ಸಂಸ್ಕೃತಿ ಇತರ ರಾಜಕೀಯ ಶಕ್ತಿಗಳ ಕುಮ್ಮಕ್ಕಿನೊಂದಿಗೆ ಇಂತಹ ಅಮಾನುಷ ಘಟನೆಗಳ ಮೂಲಕ ವ್ಯಕ್ತವಾಗುತ್ತಿರುವುದು ತೀರಾ ಸ್ಪಷ್ಟ.

ಪ್ರಸ್ತುತ ಚುನಾವಣಾ ಹಾಗೂ ಭ್ರಷ್ಟ ರಾಜಕೀಯ ವ್ಯವಸ್ಥೆಯಲ್ಲಿ ಇಂತಹ ಘಟನೆಗಳು ಪಡೆಯುವ ಸ್ವರೂಪ ದಿಗ್ಭ್ರಮೆಯನ್ನು ಉಂಟುಮಾಡುತ್ತವೆ, ಮೂಲಘಟನೆಯನ್ನು ತಿರುಚಿಹಾಕುವ, ಇಲ್ಲವೆ ರಾಜಕೀಯ ಲಾಭಕ್ಕೋಸ್ಕರ ಇಂತಹ ಘಟನೆಗಳನ್ನು ಸೃಷ್ಟಿಸುವ, ಘಟನೆಗಳು ಪಡೆಯುವ ರಾಜಕೀಯ ತಿರುವು ಮುಂತಾದವು ಹುಟ್ಟುಹಾಕುವ ಗೊಂದಲಗಳು ಸೂಕ್ಷ್ಮ ಮನಸ್ಸುಳ್ಳ ಸಾರ್ವಜನಿಕರನ್ನು ನಿರ್ಲಿಪ್ತರನ್ನಾಗಿಸಿಬಿಡುವ ಕುತಂತ್ರವನ್ನು ಒಳಗೊಂಡಿರುತ್ತದೆ.

ಇಂತಹ ಘರ್ಷಣೆಗಳುಂಟಾದಾಗಲೆಲ್ಲಾ, ಸಾಮಾನ್ಯವಾಗಿ ಒಡೆದು ಆಳುವ ಸರ್ಕಾರದ ಧೋರಣೆ, ರಾಜಕೀಯ ಲಾಭಪಡೆಯಲೆತ್ನಿಸುವ ರಾಜಕೀಯ ಪಕ್ಷಗಳು, ಇವರ ಆಶ್ರಯದಲ್ಲಿಯೇ ಪ್ರಭಲಗೊಳ್ಳುವ ಮತೀಯ ಹಾಗೂ ಫ್ಯೂಡಲ್ ಶಕ್ತಿಗಳ ನಡುವೆ ಮಹಿಳೆಯರು, ದಲಿತರು, ದುರ್ಬಲವರ್ಗದವರೆಲ್ಲಾ ಕಾಲ್ಚೆಂಡುಗಳಾಗಿ ನಿರಂತರವಾದ ಅಮಾನುಷ ದೌರ್ಜನ್ಯಕ್ಕೆ ಒಳಗಾಗುತ್ತಲೇ ಹೋಗುತ್ತಾರೆ.

ಸಮಸ್ಯೆಗಳು ಹೀಗೆ ಸಂಕೀರ್ಣ ಸ್ವರೂಪ ಪಡೆದುಕೊಳ್ಳುತ್ತಿರುವ ಸವಾಲು ಇಂದು ಮಹಿಳೆಯರ ಮುಂದಿವೆ. ಘಟನೆಗಳಿಗೆ ತಕ್ಷಣದಲ್ಲಿ ಪ್ರತಿಕ್ರಿಯೆ ತೋರಿಸುವುದು ಅನಿವಾರ್ಯವಾದರೂ ಅಷ್ಟರಿಂದ ಮಾತ್ರ ಸಮಸ್ಯೆಯ ಬೇರುಗಳನ್ನು ಕಿತ್ತೆಸೆಯಲು ಸಾಧ್ಯವಿಲ್ಲ. ಘಟನೆಗೆ ಹಿಂದಿರುವ ಶಕ್ತಿಗಳನ್ನು ಗುರುತಿಸುವ ವೈಚಾರಿಕ ನಿಲುವುಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಹಾಗೂ ಇವುಗಳ ವಿರುದ್ಧ ಒಂದು ಸುವ್ಯವಸ್ಥಿತವಾದ, ನಿರಂತರವಾದ ಹೋರಾಟವನ್ನು ಇತರ ಪ್ರಗತಿಪರ ಸಂಘ-ಸಂಸ್ಥೆಗಳ ಜೊತೆ ಜೊತೆಗೆ ನಡೆಸಬೇಕಾಗುತ್ತದೆ.

1988ರ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಇಂತಹ ಹೋರಾಟದ ಹೊಸ ಹೆಜ್ಜೆಗಳಿಗೆ ಪ್ರೇರಣೆಯಾಗಲೆಂದು ನಿರೀಕ್ಷಿಸೋಣ.

—o—

# ಸುಧಾರಣಾ ಮಹಿಳಾವಾದಿ

# ಬೆಟ್ಟಿ ಫ್ರೀಡನ್

**ಮಹಿಳಾ ಚಳುವಳಿಯ ಒಳನೋಟಗಳಿಗೆ ಸ್ಪಂದಿಸುತ್ತಾ ಬಂದಿರುವ ಬೆಟ್ಟಿಫ್ರೀಡನ್ ಖ್ಯಾತ ಪುಸ್ತಕಗಳಾದ "ದಿ ಫೆಮಿನೈನ್ ಮಿಸ್ಟಿಕ್" ಹಾಗೂ "ದಿ ಸೆಕೆಂಡ್ ಸ್ಟೇಜ್"ಗಳ ಲೇಖಕಿ ವಿವಾದಾಸ್ಪದ ವ್ಯಕ್ತಿಯಾದ ಬೆಟ್ಟಿಫ್ರೀಡನ್‌ಳ ವಿಚಾರಗಳು ಯಾವ ರಾಜಕೀಯ ಹಾಗೂ ಮಹಿಳಾ ಹೋರಾಟದ ಇತಿಹಾಸದಲ್ಲಿ ಹುಟ್ಟಿಕೊಂಡಿವೆ ಎಂಬುದು ಮೂರನೇ ಜಗತ್ತಿನ ಮಹಿಳಾ ಹೋರಾಟಗಳಿಗೆ ತೀರಾ ಅಗತ್ಯವಾಗಿದೆ.**



ಮಹಿಳಾ ಚಳವಳಿಯನ್ನು ವಿರೋಧಿಸುವ ಬಹಳಷ್ಟು ಗುಂಪುಗಳಿಗೆ ಅಮೆರಿಕಾದ ಚಳವಳಿಗಾರ್ತಿ ಹಾಗೂ ಲೇಖಕಿ ಬೆಟ್ಟಿ ಫ್ರೀಡನ್ನರ 1982ರಲ್ಲಿ ಪ್ರಕಟವಾದ ಪುಸ್ತಕ "ದಿ ಸೆಕೆಂಡ್ ಸ್ಟೇಜ್" ಒಂದು ಉದಾಹರಣೆಯಾಗಿದೆ. ಈ ಪುಸ್ತಕ ಯಾವ ವಿಚಾರಗಳನ್ನು ಹೇಳುತ್ತಿದೆ ಎಂಬುದನ್ನು ಗಮನಿಸುವ ಹಂತದಲ್ಲಿಯೇ, ಯಾವ ರಾಜಕೀಯ ಹಾಗೂ ಮಹಿಳಾ ಹೋರಾಟದ ಇತಿಹಾಸದಲ್ಲಿ ಈ ವಿಚಾರಗಳು ಹುಟ್ಟಿಕೊಂಡಿವೆ ಎಂಬುದನ್ನು ಗಮನಿಸುವುದು-ಭಾರತದಂತಹ ಮೂರನೇ ಜಗತ್ತಿನ ಮಹಿಳಾ ಹೋರಾಟಗಳಿಗೆ ತೀರಾ ಅಗತ್ಯವಾಗಿದೆ.

ತೀವ್ರ ಬದಲಾವಣೆಗೆ ಹೊಂದಿರುವ ಬಂಡವಾಳಶಾಹಿ ರಾಷ್ಟ್ರ ಅಮೆರಿಕಾ - ಮೂರನೇ ಜಗತ್ತಿನ ಮಹಿಳಾ ರಾಜಕೀಯ ಇತಿಹಾಸ ಹಾಗೂ ಅನುಭವಗಳಿಂದ ಭಿನ್ನವಾಗಿರುವ ತನ್ನದೇ ಆದ ವಿಶಿಷ್ಟ ಮಹಿಳಾ ಚಳವಳಿಯ ಇತಿಹಾಸವನ್ನು ಹೊಂದಿದೆ. ಹಾಗಾಗಿಯೇ ತಮ್ಮ ಇತ್ತೀಚಿನ ಪುಸ್ತಕವನ್ನು "ದಿ ಸೆಕೆಂಡ್ ಸ್ಟೇಜ್" ಎಂದು ಹೆಸರಿಸಿದ್ದರೂ ಸಹ, ಬೆಟ್ಟಿ ಫ್ರೀಡನ್ ಅಮೇರಿಕಾದ ಮಹಿಳೆಯರ ಬದುಕಿನ ನಾಲ್ಕು ಹಂತಗಳನ್ನು ಹೀಗೆ ವಿಂಗಡಿಸಬಹುದು. ಮಾರ್ಗರೇಟ್ ಮೀಡ್‌ರಂತಹ ಬರಹಗಾರ್ತಿಯರನ್ನು ಸೃಷ್ಟಿಸಿದ ಮೂವತ್ತರ

---

● ಚಂಪಾವತಿ ಎಚ್. ಎಸ್.

---

ದಶಕ, ಎರಡನೇ ಜಾಗತಿಕ ಯುದ್ಧದ ನಂತರ ಅಣು ಬಾಂಬ್ ಹಾಗೂ ಅನಾಥಪ್ರಜ್ಞೆ ಮತ್ತಿತರ ಕಾರಣಗಳಿಂದ ಮಹಿಳೆಯರ ಜೀವನದಲ್ಲಿ ಮಾರಕ ಪರಿಣಾಮವನ್ನು ಹುಟ್ಟುಹಾಕಿದ ನಲವತ್ತರ ದಶಕ,-ಈ ಎರಡು ದಶಕಗಳ ಅನುಭವದ ಹಿನ್ನೆಲೆಯಲ್ಲಿ ಮಹಿಳೆಯರ ನಿತ್ಯ ಬದುಕಿನಲ್ಲಿ ಪಾಪ ಪ್ರಜ್ಞೆ ಹುಟ್ಟುಹಾಕಿದ Guilt Feeling) ಐವತ್ತರ ದಶಕ, ಜೊತೆಗೆ ಬೇರೆ ಬೇರೆ

ಪ್ರಗತಿಪರ ಚಳವಳಿಗಳಿಂದ ಪೂರ್ತ ಅಭಿವ್ಯಕ್ತಿಪಡೆದ ಅರವತ್ತರ ದಶಕದ ಮಹಿಳಾ ಚಳವಳಿ. ಮೂವತ್ತು, ನಲವತ್ತು, ಐವತ್ತರ ದಶಕಗಳ ಮಹಿಳೆಯರ ಅನುಭವಗಳ ಹಿನ್ನೆಲೆಯಲ್ಲಿ 1963ರಲ್ಲಿ ಭೆಟ್ಟಿ-ಫ್ರೀಡನ್ ಬರೆದ "ದಿ ಫೆಮಿನೈಸ್ ಮಿಸ್ಟಿಕ್" - ಅಮೇರಿಕಾದ ಮಹಿಳಾ ಚಳವಳಿಗೆ ಬಹಳಷ್ಟು ಸ್ಫೂರ್ತಿದಾಯಕವಾಗಿತ್ತು. ನಲವತ್ತರ ದಶಕ ಸೃಷ್ಟಿಸಿದ ಹೆಣ್ತನದ ನಿಗೂಢತೆಯ ಸೈದ್ಧಾಂತಿಕ ನೆಲೆಗಳನ್ನು ರ್‍ಯಾಡಿಕಲ್ ಆಗಿ ಪ್ರಶ್ನಿಸುವುದಾಗಿತ್ತು. ಮೂವತ್ತರ ದಶಕದ ಅಮೇರಿಕಾದ ಮಹಿಳೆಯರು ಮತದಾನಕ್ಕಾಗಿ, ವಿದ್ಯಾಭ್ಯಾಸಕ್ಕಾಗಿ, ಹಾಗೂ ವೈಯಕ್ತಿಕ ಅಸ್ತಿತ್ವಕ್ಕೋಸ್ಕರ ಹೋರಾಡಿದುದರ ಜೊತೆಗೆ, ವೈಯಕ್ತಿಕ ಅಸ್ತಿತ್ವವನ್ನು ದಾಖಲಿಸಿ ಬದುಕಿದ ಅನುಭವಗಳಿಗೆ ವಿರುದ್ಧವಾಗಿ ಪಾಪ ಪ್ರಜ್ಞೆಯ (Guilt feeling) ಭಾವನೆಗಳಲ್ಲಿ ಬದುಕುತ್ತಿದ್ದ ಐವತ್ತು-ಅರವತ್ತು ದಶಕದ ಮಹಿಳೆಯರ ಅನುಭವಗಳನ್ನು ತೌಲನಿಕವಾಗಿ ನಡೆಸಿದ ಅಧ್ಯಯನದ ದಾಖಲೆಯಾಗಿತ್ತು. "ದಿ ಫೆಮಿನೈನ್ ಮಿಸ್ಟಿಕ್" ಎರಡನೇ ಜಾಗತಿಕ ಯುದ್ಧದ ನಂತರ ಅಮೇರಿಕಾದ ಮಹಿಳೆಯರು ಹಾಗೂ ಪುರುಷರು ಒಟ್ಟಾಗಿ ಸಾರ್ವಜನಿಕ ಕ್ಷೇತ್ರದಲ್ಲಿ– ಕೌಟುಂಬಿಕ, ವೈಯಕ್ತಿಕ ಕ್ಷೇತ್ರಕ್ಕೆ ದೂಡಲ್ಪಟ್ಟರು. ಹೀಗೆ ಕೌಟುಂಬಿಕ ಪರಿಸರ ನಲವತ್ತರ ದಶಕದಲ್ಲಿ ಮಹತ್ವ ಪಡೆದುದು-ಅಣುಬಾಂಬ್ ಸೃಷ್ಟಿಸಿದ ಅನಾಥ ಪ್ರಜ್ಞೆಯಲ್ಲಾಗಿರಬಹುದು. ಕೌಟುಂಬಿಕ ಚೌಕಟ್ಟಿನಲ್ಲಿ ಶಾಂತಿ ಪಡೆದುಕೊಳ್ಳಬಯಸಿದ್ದಾಗಿರಬಹುದು, ಜೊತೆಗೆ ಮಹತ್ವವಾಗಿ ಯುದ್ಧದ ನಂತರದ ಅಮೆರಿಕಾದ ಆರ್ಥಿಕ ಕ್ಷೇತ್ರದಲ್ಲಿ ಆದ ಏರು-ಪೇರುಗಳೂ ಕಾರಣವಾಗಿದ್ದಿರಬಹುದು. ಈ ಸಾಂಸ್ಕೃತಿಕ ಸಂದರ್ಭ ಅಮೇರಿಕಾದ ಮಹಿಳೆಯರ ಜೀವನದಲ್ಲಿ, ವೈಯಕ್ತಿಕ ಅಸ್ತಿತ್ವದ ಹೋರಾಟದಲ್ಲಿ ಮಾರಕ ಪರಿಣಾಮವನ್ನು ಹುಟ್ಟುಹಾಕಿತು. ಮೂವತ್ತರ ದಶಕದ ಮಹಿಳೆಯರು ಹುಟ್ಟುಹಾಕಿದ ಹೋರಾಟದ ಎಳೆಗಳು ನಲವತ್ತರ ದಶಕದ ಮಹಿಳೆಯರಲ್ಲಿ ಅಶಾಂತಿಯನ್ನು ಹುಟ್ಟಿಸುವ ವಾತಾವರಣ ನಿರ್ಮಾಣವಾಯಿತು. ಈ ಅಶಾಂತಿಯ ವಾತಾವರಣದಿಂದಾಗಿಯೇ ಮಹಿಳೆಯರು ಕುಟುಂಬವನ್ನು ಆದರ್ಶವಾಗಿಸಿಕೊಳ್ಳುವ, ವಿವಾಹವನ್ನು ಬದುಕಿನ ಅತ್ಯುನ್ನತ ಆಸೆಯಾಗಿಸಿಕೊಳ್ಳುವ, ಗೃಹ ವಿಜ್ಞಾನದಂತಹ ವಿಷಯಗಳನ್ನು ಅಭ್ಯಸಿಸುವ ಹಾಗೂ ಹೆಣ್ತನದ ನಿಗೂಢತೆಯನ್ನು ಇಂತಹ ವಿಚಾರಗಳಲ್ಲಿ ಕಂಡುಕೊಳ್ಳುವ ಆಯ್ಕೆಯನ್ನು ಹುಟ್ಟುಹಾಕಿತು. ಒಮ್ಮೆ ಹೋರಾಟ ನಡೆಸಿ ಸಾರ್ವಜನಿಕ ಕ್ಷೇತ್ರಗಳಲ್ಲಿ ಕಾಲಿರಿಸಿದ ಅಮೇರಿಕಾದ ಮಹಿಳೆಯರು, ಐವತ್ತರ ಪ್ರಾರಂಭದಷ್ಟರಲ್ಲಿ ಕುಟುಂಬದ ನಾಲ್ಕು ಗೋಡೆಗಳಿಗೆ ಭ್ರಮೆಯಿಂದ ಹಿಂತಿರುಗಿ, ತಮ್ಮನ್ನು ತಾವೇ ಹೆಣ್ತನದ ನಿಗೂಢತೆಗೆ (The Feminine mystique) ಒಡ್ಡಿಕೊಂಡರಲ್ಲದೇ, ತಮ್ಮ ಆಯ್ಕೆಗಳಿಗೆ ತಾವೇ ಬಲಿಪಶುಗಳಾದರು.

ಈಡನ್ ತೋಟದ ಬಗ್ಗೆ ಮತ್ತೆ ಮಿಥ್ ಸೃಷ್ಟಿಸಿದ ಒಟ್ಟು ಪರಿಸರದ ಬಗ್ಗೆ ಭೆಟ್ಟಿ-ಫ್ರೀಡನ್ "ದಿ ಫೆಮಿನೈನ್ ಮಿಸ್ಟಿಕ್"ನಲ್ಲಿ ಚರ್ಚಿಸುತ್ತಾರೆ. ಮೂವತ್ತರ ದಶಕ ಸೃಷ್ಟಿಸಿದ ಬದುಕಿನ ಹೋರಾಟದ ಮೂರ್ತ ಅಭಿವ್ಯಕ್ತಿ ಹೇಗೆ ತನ್ನ ಕೊಂಡಿಗಳನ್ನು ನಲವತ್ತರ ದಶಕದಲ್ಲಿ ಕಳಚಿಕೊಂಡಿತು ?

ಈ ಹೋರಾಟದ ಬದುಕಿನ ಎಳೆಗಳನ್ನು ನಾಶ ಮಾಡಿದ ವೈಚಾರಿಕತೆ ಯಾವುದು ?

ಹೆಣ್ತನದ ನಿಗೂಢತೆಯನ್ನು ಸಾಧನವಾಗಿ ಮಾಡಿಕೊಂಡು ಹೇಗೆ ಪಿತೃಪ್ರಧಾನ ಮೌಲ್ಯಗಳು ಮಹಿಳೆಯರನ್ನು ವೈಯಕ್ತಿಕ ಕ್ಷೇತ್ರಕ್ಕೆ ಹಿಂದಿರುಗಿಸುವುದರಲ್ಲಿ ಯಶಸ್ವಿಯಾದವು ?

ಭ್ರಮೆಗಳಿಂದ ಕುಟುಂಬದ ಸವಲತ್ತುಗಳಿಗೆ ತಮ್ಮನ್ನು ಮೀಸಲಾಗಿರಿಸಿಕೊಂಡು ಮಹಿಳೆಯರು ಎಷ್ಟರಮಟ್ಟಿಗೆ ಸುಖಿಗಳಾದರು ?

ಇಂತಹ ಪ್ರಶ್ನೆಗಳ ಹಿನ್ನಲೆಯಲ್ಲಿಯೇ "ದಿ ಫೆಮಿನೈನ್ ಮಿಸ್ಟಿಕ್"ನಲ್ಲಿ ಐವತ್ತರ ದಶಕದ ಮಹಿಳೆಯರ ಪಾಪಪ್ರಜ್ಞೆಯ ಭಾವನೆಗಳ ಬದುಕಿಗೆ ಕನ್ನಡಿ ಹಿಡಿದ ಭೆಟ್ಟಿ-ಫ್ರೀಡನ್ ಅಮೆರಿಕಾದ ಅರವತ್ತರ ದಶಕದ ಮಹಿಳಾ ಚಳವಳಿಗೆ ಒಂದು ಧ್ವನಿಯಾದರು. ಆದರೆ ಮೂವತ್ತು ಹಾಗೂ ನಲವತ್ತರ ದಶಕದ ಕುತೂಹಲಕಾರಿ ಮಹಿಳಾ ಇತಿಹಾಸದ ಬದಲಾವಣೆಯನ್ನು ಭೆಟ್ಟಿ-ಫ್ರೀಡನ್ ಗುರುತಿಸಿದ್ದು ಯಾವ ಸೈದ್ಧಾಂತಿಕ ಹಿನ್ನೆಲೆಯಲ್ಲಿ ? ಯಾವ ಸೈದ್ಧಾಂತಿಕ ವಿಚಾರಧಾರೆಯ ಅಡಿಯಲ್ಲಿ ಐವತ್ತರ ದಶಕದ ಮಹಿಳೆಯರ ಅನುಭವ

ಗಳನ್ನು ಇವರು ಅರ್ಥೈಸಿಕೊಂಡರು ? ಯಾವ ವರ್ಗದ ಮಹಿಳೆಯರು ಇವರ ವಿಶ್ಲೇಷಣೆಯ ತಳಹದಿಯಾಗಿದ್ದರು ? ಇಂತಹ ಪ್ರಶ್ನೆಗಳು ಬೆಟ್ಟಿ ಫ್ರೀಡನ್ನರ "ದಿ ಸೆಕೆಂಡ್ ಸ್ಟೇಜ್"ನಲ್ಲಿಯ ನಿಲುವುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಾಯವಾಗುತ್ತವೆ ಎಂಬ ಹಿನ್ನಲೆಯಲ್ಲಿ ಈ ಪ್ರಶ್ನೆಗಳನ್ನು ನಾನು ಇಲ್ಲಿ ಎತ್ತುತ್ತಿದ್ದೇನೆ.

ಗಂಡ, ಮಕ್ಕಳು ಹಾಗೂ ಕುಟುಂಬದ ಸಂಬಂಧಗಳಲ್ಲಿ ಹೆಣ್ತನದ ತೃಪ್ತಿ. ಹೆಣ್ತನದ ಪಕ್ವತೆ ಹಾಗೂ ಹೆಣ್ತನದ ಸಹಜತೆಗಳು ವಿಜೃಂಭಿಸುವ ಬಗೆಯಲ್ಲಿ ಫೆಮಿನೈನ್ ಮಿಸ್ಟಿಕನ ಬಲೆ ಐವತ್ತರ ದಶಕದಲ್ಲಿ ಅಮೇರಿಕಾದಲ್ಲಿ ಬಲವಾಗಿ ಹಬ್ಬಿಕೊಂಡಿತ್ತು. "ಸಮಾಜದ ಸ್ಥಾನಮಾನಗಳಿಗೆ ಹೊಂದಿಕೊಳ್ಳುವುದು", "ಸಮಾಜ ಏನು ಹೇಳುತ್ತದೋ ಅದು ಹೆಣ್ಣಿನ ವ್ಯಕ್ತಿತ್ವ", "ಹೆಂಗಸಿನ ದೈಹಿಕ ರಚನೆಯೇ ವಿಧಿ"- ಈ ರೀತಿಯ ಸಮಾಜ ವಿಜ್ಞಾನಿಗಳ, ಕ್ರಿಯಾವಾದಿಗಳ (Functionalists) ಹಾಗೂ ಫ್ರಾಯ್ಡ್‌ನ ಒಟ್ಟು ವಿಚಾರಧಾರೆ ಆ ದಶಕದಲ್ಲಿ ಹೆಣ್ತನದ ನಿಗೂಢತೆಯ ಮಿಥ್ ಸೃಷ್ಟಿಸುವುದರಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿದವು. ಸ್ವತಃ ಮಾನಸಿಕ ಶಾಸ್ತ್ರಜ್ಞರಾಗಿರುವ ಬೆಟ್ಟಿ ಫ್ರೀಡನ್ ಮಾನಸಿಕ ನೆಲೆಗಳಲ್ಲಿ ಈ ಸಾಂಸ್ಕೃತಿಕ ವಾತಾವರಣವನ್ನು ವಿಶ್ಲೇಷಿಸುವ ಮಹತ್ವವನ್ನು ಗುರುತಿಸಿದರೂ ಸಹ, ವಾಸ್ತವದಲ್ಲಿ ಕ್ರಿಯಾವಾದಿಗಳ ಒಟ್ಟು ಧೋರಣೆಯನ್ನು ವಿರೋಧಿಸುವ ಹಂತದಲ್ಲಿ ತಮ್ಮ ಸೈದ್ಧಾಂತಿಕ ಹಿನ್ನಲೆಯನ್ನು ರೂಪಿಸಿಕೊಂಡುದನ್ನು "ದಿ ಫೆಮಿನೈನ್ ಮಿಸ್ಟಿಕ್"ನಲ್ಲಿ ಕಾಣಬಹುದು.

ಐವತ್ತರ ಈ ಸಾಂಸ್ಕೃತಿಕ ವಾತಾವರಣ ಅಮೆರಿಕೆಯ ಮಹಿಳೆಯ ಜೀವನದಲ್ಲಿ ಕುಟುಂಬ ಅಥವಾ ವೈಯಕ್ತಿಕ ಅಸ್ತಿತ್ವದಂತಹ ಇಬ್ಬಗೆಯ ಆಯ್ಕೆಯ ಘರ್ಷಣೆಯನ್ನು ಹುಟ್ಟುಹಾಕಿತು. ಈ ಘರ್ಷಣೆಯ ಜೊತೆಗೆ ಮಹಿಳೆಯರು ನಿತ್ಯ ಬದುಕಿನಲ್ಲಿ ಅನುಭವಿಸುತ್ತಿದ್ದ ಪಾಪಪ್ರಜ್ಞೆಯ ವಿಶ್ಲೇಷಣೆಯಲ್ಲಿ ಕ್ರಿಯಾವಾದಿಗಳ ವಿಚಾರಧಾರೆಯನ್ನು ವಿರೋಧಿಸುವ ಮೂಲಕ ಬೆಟ್ಟಿ ಫ್ರೀಡನ್ ಮಹಿಳೆಯರ ಮೂಕ ರೋಧನಕ್ಕೆ ಸ್ಪಷ್ಟ ಅಭಿವ್ಯಕ್ತಿ ನೀಡಿದರು. ಕ್ರಿಯಾವಾದಿಗಳ ವಿಚಾರಧಾರೆಯ ಸ್ತರಗಳನ್ನು (Functionalist approach) ಪಿತೃ ಪ್ರಧಾನ ಸಂಸ್ಕೃತಿಯ ಹಿನ್ನೆಲೆಯಲ್ಲಿ ಗುರುತಿಸಿ, ಅದೇ ಸೈದ್ಧಾಂತಿಕ ನೆಲೆಯಲ್ಲಿ ಮಹಿಳೆಯರ ಜೀವನದ ಘರ್ಷಣೆಯನ್ನೂ ಸಹ ಇವರು ಗುರುತಿಸಿದರು. ಆದರೆ ಈ ಪಿತೃ ಪ್ರಧಾನ ಸಂಸ್ಕೃತಿಯ ನೆಲೆಯನ್ನು ಬೆಟ್ಟಿ ಫ್ರೀಡನ್ ಐತಿಹಾಸಿಕ ಸಂದರ್ಭದಲ್ಲಿ ಗುರುತಿಸುವುದಿಲ್ಲ. ಹೀಗೆ ಪಿತೃ ಪ್ರಧಾನ ಸಂಸ್ಕೃತಿಯ ಬೇರುಗಳನ್ನು ಐತಿಹಾಸಿಕವಾಗಿ ವಿಶ್ಲೇಷಿಸದಿರುವ ಹಂತದಲ್ಲಿಯೇ ಬೆಟ್ಟಿ ಫ್ರೀಡನ್ ಅಮೇರಿಕಾದ ರಾಜಕೀಯ ಹಾಗೂ ಆರ್ಥಿಕ ಪರಿಣಾಮಗಳನ್ನು ಗಮನಿಸದೇ ಹೋದದ್ದು, ಹತ್ತೊಂಭತ್ತು ವರ್ಷಗಳ ನಂತರದ ಅವರ 'ದಿ ಸೆಕೆಂಡ್ ಸ್ಟೇಜ್'ನ ನಿಲುವುಗಳಿಗೆ ಬಹುಮಟ್ಟಿಗೆ ಕಾರಣವಾಗಿದೆ.

ಬೆಟ್ಟಿ ಫ್ರೀಡನ್ನರ ಐತಿಹಾಸಿಕ ನೆಲೆ ಇರದ ಪಿತೃ ಪ್ರಧಾನ ಮೌಲ್ಯಗಳ ವಿಶ್ಲೇಷಣೆಯನ್ನು ಅವರ ವಿಶ್ಲೇಷಣೆಯ ಬಗೆಗಳಲ್ಲಿ 'ದಿ ಫೆಮಿನೈನ್ ಮಿಸ್ಟಿಕ್' ನಲ್ಲಿ ಕಾಣಬಹುದು. ಕ್ರಿಯಾವಾದಿಗಳ ಕಾರ್ಯವಿಧಾನದ ಬಗೆಯನ್ನು ಬೆಟ್ಟಿ ಫ್ರೀಡನ್ ಪತ್ರಿಕೆಗಳ ಬರಹಗಳಲ್ಲಿ, ಕಾದಂಬರಿಗಳಲ್ಲಿ, ಮಹಿಳೆಯರ ಬದುಕಿನ ಸಾಮಾನ್ಯ ಕತೆಗಳಲ್ಲಿ ಟೆಲಿವಿಷನ್ ಕಾರ್ಯಕ್ರಮಗಳಲ್ಲಿ ಹಾಗೂ ಮಹಿಳೆಯರ ಅನುಭವಗಳನ್ನು ಉದ್ದೇಶಪೂರ್ವಕವಾಗಿ ಮಾಡಿದ ಸಂದರ್ಶನಗಳಲ್ಲಿ ವಿವರಿಸುತ್ತಾರೆ. 'ನನ್ನ ಬದುಕು ಇಷ್ಟೇನೇ ?' 'ನಾನು ಯಾರು, '? 'ನನ್ನ ಗಂಡ, ಮಕ್ಕಳು ಕುಟುಂಬ ಇದಕ್ಕಿಂತ ಭಿನ್ನವಾದುದೇನನ್ನೋ ನಾನು ಬಯಸುತ್ತೇನೆ,' ಈ ರೀತಿಯ ಆಂತರಿಕ ಪ್ರಶ್ನೆಗಳು ಐವತ್ತರ ದಶಕದ ಪತ್ನಿಯರ ಅನುಭವಗಳಾಗಿದ್ದವು. ಈ ರೀತಿಯ ಭಾವನೆಗಳು, ಪಾಪ-ಪ್ರಜ್ಞೆಗಳು, ಅನುಭವಗಳು, ಅತೃಪ್ತಿಗಳು, ವೇದನೆಗಳನ್ನು ಅವರು ಕೆಳಕಂಡ ಶಬ್ದಗಳಲ್ಲಿ ವಿವರಿಸುತ್ತಿದ್ದರು. 'ಅಪೂರ್ಣ', 'ಖಾಲಿತನ,' 'ಅಸಂತೋಷ', 'ಆಯಾಸದಾಯಕ', 'ಅತೃಪ್ತಿ', 'ಅಸಹಾಯಕತೆ,—ಈ ಅಭಿವ್ಯಕ್ತಿಗಳು ಅವರ ಮೂಕರೋಧನವನ್ನು ವ್ಯಕ್ತಪಡಿಸುತ್ತಿದ್ದ ಸಂದರ್ಭ ಅದಾಗಿತ್ತು. ಈ ಸಂದರ್ಭದಲ್ಲಿ ಒಟ್ಟು ಸಾಂಸ್ಕೃತಿಕ ಸಂದರ್ಭ ಇವರ ಸಹಾಯಕ್ಕೆ ಧಾವಿಸಿತು. ಸಂತೋಷಕರ ವಿವಾಹವೇ ಮಹಿಳೆಯರ ಅಶಾಂತಿಗೆ ಕೊನೆಯ ಉತ್ತರವೆಂಬುದು ಧೃಡೀಕರಿಸಲ್ಪಟ್ಟಿತು. ವಿವಾಹ ಹಾಗೂ ವಿವಾಹ ಸಮಸ್ಯೆಯ ಸಲಹೆಗಾರರು ಹುಟ್ಟಿಕೊಂಡರು. ಪತ್ರಿಕೆಗಳು ಮಹಿಳೆಯರ ಉತ್ತರಿಸಲಾಗದ ಅಸಂತೋಷವನ್ನು ವಿರೋಧಿ

ಸಿತು. ಸಮಾಜ ಶಾಸ್ತ್ರಜ್ಞರು ಮಹಿಳೆಯರ ವಿದ್ಯಾಭ್ಯಾಸದಲ್ಲಿ ತಪ್ಪುಗಳನ್ನು ಕಂಡುಹಿಡಿದರು. ಮಹಿಳೆಯರ ರಾಜಕೀಯ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದರ ಮೂಲಕ, ಅವಳ ಹೆಣ್ತನದ ಸಹಜತೆಗೆ ಆಕೆಯನ್ನು ಬಗ್ಗಿಸುವುದು ಸಾಧ್ಯವೆಂಬ ಸಲಹೆಗಳು ಬಂದವು. ಮೂವತ್ತರ ದಶಕದ ಫೆಮಿನಿಸ್ಟರು ಹೋರಾಡಿದ ವಿದ್ಯಾಭ್ಯಾಸ, ಸ್ವಾತಂತ್ರ್ಯ ಹಾಗೂ ಸಮಾನತೆಯ ಹಕ್ಕುಗಳು—ಐವತ್ತರ ದಶಕದ ಮಹಿಳೆಯರ ಅಸಹಾಯಕತೆ, ಅಶಾಂತಿಗೆ, ಸ್ತ್ರೀತ್ವದ ನಾಶಕ್ಕೆ ಕಾರಣಗಳೆಂದು ದೃಢೀಕರಿಸಲ್ಪಟ್ಟವು. ಪತ್ರಿಕೆಗಳು ಸಮಾಜ ವಿಜ್ಞಾನಿಗಳು, ಮಾನಸಿಕ ಶಾಸ್ತ್ರಜ್ಞರು, ಫ್ರಾಯ್ಡ್‌ನ ವಿಚಾರಧಾರೆ ಎತ್ತಿ ಹಿಡಿಯುವುದರ ಮೂಲಕ ಹೆಣ್ತನದಲ್ಲಿ ತೃಪ್ತಿ ಪಡೆಯುವುದೇ ಮಹಿಳೆಯರ ಸಮಸ್ಯೆಗಳಿಗೆ ಉತ್ತರವಾದೀತೆಂಬ ಸಿದ್ಧಾಂತವನ್ನು ಬಿತ್ತರಿಸಿದವು. ಈ ಬಗೆಯ ಅಂಕಿ-ಅಂಶ ದಾಖಲಾತಿಗಳ ಅಧ್ಯಯನದ ಮೂಲಕ ಭೆಟ್ಟಿ-ಫ್ರೀಡನ್, ಮೇಲ್ಕಂಡ ಅಂಶಗಳನ್ನೊಳಗೊಂಡ ಕ್ರಿಯಾವಾದಿಗಳ ನಿಲುವುಗಳು ಹೆಣ್ತನದ ನಿಗೂಢತೆಯ ಸಾಂಸ್ಕೃತಿಕ ಸಂದರ್ಭ ಸೃಷ್ಟಿಸುವುದರ ಮೂಲಕ ಹೇಗೆ ಅಮೇರಿಕಾದ ಪತ್ನಿಯರ ರೋಧನಗಳನ್ನು ಮೌನವಾಗಿಸುವಲ್ಲಿ ಬಲವಾದ ಪಾತ್ರ ವಹಿಸಿದವು ಎಂಬುದನ್ನು ವಿಶ್ಲೇಷಿಸುತ್ತಾರೆ.

ಮೂವತ್ತರ ದಶಕದ ಮಹಿಳಾ ಹಾಗೂ ಇತರೇ ಪತ್ರಿಕೆಗಳಲ್ಲಿ ಮಹಿಳೆಯ ಬದುಕಿನ ಚಿತ್ರಣದಲ್ಲಿ ಅವಳ ವ್ಯಕ್ತಿತ್ವದ ಹುಡುಕಾಟದ ಮೇಲೆ, ಸಾರ್ವಜನಿಕ ಕ್ಷೇತ್ರದಲ್ಲಿ ಆಕೆಯ ಕೆಲಸದ ಕಾಳಜಿಯ ಬಗ್ಗೆ, ವಿವಾಹ ಸಂಬಂಧದಲ್ಲಿ ತನ್ನ ಸ್ವ—ವ್ಯಕ್ತಿತ್ವ ಕಾಯ್ದುಕೊಳ್ಳುವ ಆಕೆಯ ಹೋರಾಟದ ಬಗ್ಗೆ ಹೆಚ್ಚು ಗಮನಗಳಿದ್ದವು 30ರ ದಶಕದ ಹೆಂಗಸರು ತಮ್ಮ ಸಾರ್ವಜನಿಕ ಹಾಗೂ ವೈಯಕ್ತಿಕ ಕ್ಷೇತ್ರಗಳಲ್ಲಿ ಸಾಮರಸ್ಯ ಸಾಧಿಸಲು ಹೆಣಗುತ್ತಿದ್ದು, ಪುರುಷರು ಮಹಿಳೆಯ ಸ್ವತಂತ್ರ ವ್ಯಕ್ತಿತ್ವವನ್ನು ಹೆಮ್ಮೆಯಿಂದ ಒಪ್ಪಿಕೊಂಡ ಬಗೆಯ ಕತೆಗಳು ಆ ದಶಕದ ಪತ್ರಿಕೆಗಳಲ್ಲಿ ಸಾಮಾನ್ಯ ವಿಚಾರಗಳಾಗಿದ್ದವು. ಇದಕ್ಕೆ ವಿರೋಧವಾಗಿ ಐವತ್ತರ ದಶಕದ ಪತ್ರಿಕೆಗಳು ವಿವಾಹದ ಅತ್ಯುನ್ನತ ಸಂತಸವನ್ನು, ವಿದ್ಯಾಭ್ಯಾಸದಲ್ಲಿ ಹೋಮ್ ಇಕಾನಾಮಿಕ್ಸ್ ನಂತಹ ವಿಷಯಗಳು, ವಿವಾಹದ ಸಾಫಲ್ಯಕ್ಕೆ ಆಗತ್ಯವೆಂದು ಎತ್ತಿ ಹಿಡಿಯಲ್ಪಟ್ಟವು. ಫ್ರಾಯ್ಡ್‌ನ ರೀತಿ ಈ ಸಾಂಸ್ಕೃತಿಕ ವಲಯ ನೇರವಾಗಿ 'ಶಿಶ್ನ ಅಸೂಯೆ'ಯ ತಾತ್ವಿಕ ನಿಲುವನ್ನು ಮುಂದಿಡಲಿಲ್ಲ. ಬದಲಾಗಿ ಹೆಣ್ತನದ ತೃಪ್ತಿಯನ್ನು ತಾಯ್ತನದ ಹಿರಿಮೆಯಲ್ಲಿ ಎತ್ತಿಹಿಡಿಯುವುದರ ಮೂಲಕ ಕೌಟುಂಬಿಕ ಜೀವನದಲ್ಲಿ ಹೆಣ್ಣಿನ ಸ್ಥಾನದ ಮಹತ್ವವನ್ನು ವಿಜೃಂಭಿಸಿತು. ಕ್ರಿಯಾವಾದಿಗಳು ಕೌಟುಂಬಿಕ ವಿಚಾರದಲ್ಲಿ ಕೆಲವು ನಿರ್ದಿಷ್ಟ ನಿಲುವುಗಳನ್ನು ತಳೆದರು. ಸಾಕ್ಸೆಕಿನ ಹೇಳುವ ಹಾಗೆ ಕ್ರಿಯಾವಾದಿಗಳ ನಿರ್ದಿಷ್ಟ ನಿಲುವುಗಳನ್ನು ಹೀಗೆ ಗುರುತಿಸಬಹುದು.

1. ಮಹಿಳೆಯರು ಮೂಲಭೂತವಾಗಿ ಪತ್ನಿಯರು ಹಾಗೂ ತಾಯಂದಿರು. ಈ ವ್ಯಕ್ತಿತ್ವದ ಅಂಶ ಮಹಿಳೆಯ ತಾಯ್ತನದ ಕ್ರಿಯೆಯಿಂದಾಗಿ ಉದ್ಭವಿಸಿದೆ.
2. ಕುಟುಂಬ ಮೂಲಭೂತವಾಗಿ ನ್ಯೂಕ್ಲಿಯರ್ ಹಾಗೂ ಏಕಪತ್ನಿ—ಪತಿ (Manogamsous) ಕುಟುಂಬದ ರಚನೆಯನ್ನು ಹೊಂದಿದೆ.
3. ಪುರುಷರು ಮೂಲಭೂತವಾಗಿ ಸಮಾಜ ಹಾಗೂ ಕುಟುಂಬದಲ್ಲಿ ನಿರ್ಧಾರಗಳನ್ನು ಮಾಡುವವರು. ಒಟ್ಟಾಗಿ ಹೇಳುವುದಾದಲ್ಲಿ ಮಹಿಳೆಯರು ಮಕ್ಕಳನ್ನು ಸೃಷ್ಟಿಸುತ್ತಾರೆ; ಪುರುಷರು ಸಮಾಜ ಹಾಗೂ ಸಂಸ್ಕೃತಿಯನ್ನು ಸೃಷ್ಟಿಸುತ್ತಾರೆ.

ಈ ರೀತಿಯ ನಿರ್ದಿಷ್ಟ ನಿಲುವುಗಳಲ್ಲಿ ಕ್ರಿಯಾವಾದಿಗಳು ಲೈಂಗಿಕ ಶ್ರಮ ವಿಭಜನೆ ಎತ್ತಿ ಹಿಡಿದರಲ್ಲದೇ ಇದು ಕಾರ್ಯವಿಧಾನದ ರೀತಿ ಎಂಬುದನ್ನು ಎತ್ತಿ ಹಿಡಿದರು. ಈ ಒಳಮುಖ ಬವಣೆಯನ್ನು ಇಚ್ಛಿಸಿದ ಬಂಡವಾಳ ಶಾಹಿ ಅಮೇರಿಕಾ—ಕುಟುಂಬ ಪತ್ರಿಕೆಗಳು ಮನಶ್ಶಾಸ್ತ್ರ, ಸಮಾಜ ಶಾಸ್ತ್ರ, ಟೆಲಿವಿಷನ್‌ಗಳ ಸಹಾಯದಿಂದ ಒಂದು ಸಾಂಸ್ಕೃತಿಕ ವಲಯ ನಿರ್ಮಿಸಿ, 'ಫೆಮಿನೈನ್ ಮಿಸ್ಟಿಕ್' ಹುಟ್ಟು ಹಾಕುವುದರಲ್ಲಿ ಯಶಸ್ವಿಯಾಯಿತು. ಮೂವತ್ತರ ಹಾಗೂ ಐವತ್ತನೇ ದಶಕದ ಒಟ್ಟು ಸಾಂಸ್ಕೃತಿಕ ಸಂದರ್ಭದ ಅಧ್ಯಯನದ ಮೂಲಕ ಭೆಟ್ಟಿ-ಫ್ರೀಡನ್ ವಿಕ್ಟೋರಿಯನ್ ಮಹಿಳೆಯರು ಲೈಂಗಿಕ ಅಭಿಲಾಷೆಯನ್ನು ಹೃದಯದೊಳಗೇ ಹುದುಗಿದ ಹಾಗೆಯೇ, ಐವತ್ತರ ದಶಕದ ಮಹಿಳೆಯರು ತಮ್ಮ ವ್ಯಕ್ತಿತ್ವದ ಮಜಲುಗಳ ಅಭಿವ್ಯಕ್ತಿಯ ಆಕಾಂಕ್ಷೆಗಳನ್ನು ತಮ್ಮಲ್ಲಿಯೇ ಹುದುಗಿಸಿದ್ದೇ ಅವರ ಮೂಕ ರೋದನಕ್ಕೆ ಕಾರಣವಾಗುತ್ತೆಂದು ವಿಶ್ಲೇಷಿಸು

ತ್ತಾರೆ. ಹೀಗೆ ಕ್ರಿಯಶಾವಾದಿಗಳು ಒಂದು ಸಾಂಸ್ಕೃತಿಕ ವಲಯವನ್ನು ಬಳಸಿಕೊಂಡ ಬಗೆಯನ್ನು ಭೆಟ್ಟಿ ಫ್ರೀಡನ್ ಪಿತೃ ಪ್ರಧಾನ ಮೌಲ್ಯಗಳ ಹಿನ್ನೆಲೆಯ ಸೈದ್ಧಾಂತಿಕ ನಿಲುವಿನಲ್ಲಿ ವಿವರಿಸುತ್ತಾರೆ. ಈ ನಿಲುವಿನ ಕೆಲವು ಮಿತಿಗಳನ್ನು 'ದಿ ಫೆಮಿನೈನ್ ಮಿಸ್ಟಿಕ್' ನಲ್ಲಿ ಹೀಗೆ ಗುರುತಿಸಬಹುದು.

1. ನಲವತ್ತರ ದಶಕದ ಕುತೂಹಲಕಾರಿ ಇತಿಹಾಸದ ಬದಲಾವಣೆಯಲ್ಲಿ ಅಮೇರಿಕಾದ ಆ ಸಂದರ್ಭದ ಆರ್ಥಿಕ ಏರು-ಪೇರುಗಳನ್ನು ಭೆಟ್ಟಿ ಫ್ರೀಡನ್ ಪೂರ್ಣವಾಗಿ ಅಲಕ್ಷಿಸಿದ್ದಾರೆ.

2. ಕುಟುಂಬ ಹಾಗೂ ಲೈಂಗಿಕ ಶ್ರಮ ವಿಭಜನೆಗಳು ಗಳು ಒಂದು ಐತಿಹಾಸಿಕ ಸೈದ್ಧಾಂತಿಕ ನೆಲೆಯಲ್ಲಿ ವಿಶ್ಲೇಷಿಸಲ್ಪಟ್ಟಿಲ್ಲ. ಹಾಗಾಗಿಯೇ ಇವರ ಪಿತೃ ಪ್ರಧಾನ ಮೌಲ್ಯಗಳ ವಿಶ್ಲೇಷಣೆಯ ನೆಲೆ ಐತಿಹಾಸಿಕವಲ್ಲದ್ದು ಎಂದು ನಾನು ಪ್ರಾರಂಭದಲ್ಲಿ ಹೇಳಿದ್ದು.

3. 'ಅಮೇರಿಕೆ'ಯ ಒಟ್ಟು ರಾಜ್ಯ ಸಂಬಂಧದಲ್ಲಿ 'ಕುಟುಂಬ'ದ ಪಾತ್ರವನ್ನು ಭೆಟ್ಟಿ ಫ್ರೀಡನ್ ವಿವರಿಸುವುದಿಲ್ಲ.

4. ಭೆಟ್ಟಿ ಫ್ರೀಡನ್ ವಿಶ್ಲೇಷಿಸಿದ ವಿಚಾರಗಳಿಗೆ ಒಂದು ವರ್ಗದ ಮಹಿಳೆಯರು ತಳಹದಿಯಾಗಿದ್ದರು. ಪಟ್ಟಣದ ಹಾಗೂ ಮಧ್ಯಮವರ್ಗದ ಪತ್ನಿಯರ ಅನುಭವಗಳನ್ನೇ ಇವರು ಸಾರ್ವತ್ರಿಕ ಅನುಭವಗಳನ್ನಾಗಿ ವಿಶ್ಲೇಷಿಸಿದ್ದಾರೆ.

ಐವತ್ತರ ದತಕದ ವೈಯಕ್ತಿಕ/ಸಾರ್ವಜನಿಕ ಈ ಇಬ್ಬಗೆಯ ಘರ್ಷಣೆ, ಆಸ್ತಿತ್ವದ ಕ್ರೈಸಿಸ್‌ನ್ನು ಡೈಯತಿಕ್ಟಿಕಲ್ ಹಂತದಲ್ಲಿ ಗುರುತಿಸುವ ಕೆಲಸವನ್ನು ಭೆಟ್ಟಿ ಫ್ರೀಡನ್ ಸಮರ್ಥವಾಗಿ ಮಾಡಿದರು.

'ನಾನು ಪತ್ನಿ'—ಥೀಸಿಸ್. 'ನಾನು ಮನೆಗೆಲಸವನ್ನು ದ್ವೇಷಿಸುತ್ತೇನೆ—ಆ್ಯಂಟಿ ಥೀಸಿಸ್.' ನಾನು ಕ್ರಿಯಾಶೀಲಳು — ಸಿನ್‌ಥಿಸಿಸ್. ಆದರೆ ಈ ಡೈಯಲಿಕ್ಟಿಕಲ್ ಹಂತ ಅವರ ಸೈದ್ಧಾತಿಕ ನಿಲುವಿನ ಮಿತಿಗಳಿಂದಾಗಿ ಸಾಂಸ್ಕೃತಿಕ ವಲಯ-ರಾಜಕೀಯ ಹಾಗೂ ಆರ್ಥಿಕ ಅಂಶಗಳ ಚೌಕಟ್ಟಿನಲ್ಲಿ ವಿಶ್ಲೇಷಿಸಲ್ಪಡಲಿಲ್ಲ. ಹೀಗೆ ವಿಶಾಲವಾದ ಚೌಕಟ್ಟಿನಲ್ಲಿ ಮಹಿಳೆಯರ ಪ್ರಶ್ನೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಇದ್ದ ಸೈದ್ಧಾಂತಿಕ ಕೊರತೆ ಹಾಗೂ ಇವರ ಸುಧಾರಣಾವಾದಿ ಮನೋಭಾವದಿಂದಾಗಿ—ನಾನು ಪ್ರಾರಂಭದಲ್ಲಿ ಹೇಳಿದ ಹಾಗೆ—ಅವರ ಈಗಿನ 'ದಿ ಸೆಕೆಂಡ್ ಸ್ಟೇಜ್' ನ ನಿಲುವುಗಳಿಗೆ ಕಾರಣವಾಗಿದೆ.

"ದಿ ಸೆಕೆಂಡ್ ಸ್ಟೇಜ್"

ಈ ಪುಸ್ತಕದಲ್ಲಿ ಭೆಟ್ಟಿ ಫ್ರೀಡನ್ ಅಮೆರಿಕಾದ ಆರ್ಥಿಕ ಉಳಿವು, ಆರ್ಥಿಕ ಮುಗ್ಗಟ್ಟು, ನಿರುದ್ಯೋಗದಂತಹ ಪ್ರಶ್ನೆಗಳು ಅಗಾಧವಾಗಿರುವಾಗ, ಮಹಿಳೆಯರ ಪ್ರಶ್ನೆಗಳು ಈ ಹಿನ್ನೆಲೆಯಲ್ಲಿ ಅರ್ಥೈಸಬೇಕಾಗಿದೆ ಎನ್ನುತ್ತಾರೆ. ಜೊತೆಗೆ ಹತ್ತೊಂಭತ್ತು, ಇಪ್ಪತ್ತು ವರ್ಷಗಳ ಮಹಿಳಾ ಚಳುವಳಿಯ ಹೋರಾಟ ಅಮೆರಿಕಾದ ಯುವ ಪೀಳಿಗೆಯಲ್ಲಿ ಅಶಾಂತಿ ಹುಟ್ಟುಹಾಕಿದೆ ಎನ್ನುತ್ತಾರೆ. ಸುಧಾರಣಾವಾದಿ ಹಂತದಲ್ಲಿ ಆರ್ಥಿಕ ಉಳಿವಿನ ಜೊತೆಗಿನ ಮಾನವತೆಯ ಉಳಿವು ಇಂದು ಅವರ ಕಾಳಜಿಯಾಗಿದೆ, ಹತ್ತೊಂಭತ್ತು ವರ್ಷಗಳ ಹೋರಾಟ ಹುಟ್ಟು ಹಾಕಿದ ಇಂದಿನ ಬದುಕು ಯುವ ಪೀಳಿಗೆಯಲ್ಲಿ, ಹರೆಯದ ಹುಡುಗಿಯರ ಮಾನಸಿಕ ಸ್ವಾಸ್ಥ್ಯವನ್ನು ಅಲುಗಾಡಿಸಿದೆ. ಅಶಾಂತಿಯ ಬಿರುಗಾಳಿ ಎಬ್ಬಿಸಿದೆ ಎನ್ನುವ ಭೆಟ್ಟಿ ಫ್ರೀಡನ್ ಮಹಿಳಾ ಹೋರಾಟದ ಪ್ರಥಮ ಹಂತ ಮುಗಿದುದಾಗಿ ನುಡಿಯುತ್ತಾರೆ. "ಈ ಎರಡನೇ ಹಂತದಲ್ಲಿ ಇಬ್ಸನ್ನನ ನೋರಾ! ಬಾಗಿಲನ್ನು ಧಡಾರೆನ್ನಿಸಿ ತೆಗೆದು ತನ್ನನ್ನು ಪ್ರಪಂಚದಲ್ಲಿ ಕಂಡುಕೊಂಡ ದಾರಿಯ ವೃತ್ತದ ಪ್ರಾರಂಭಕ್ಕೆ ಆಕೆ ಬರಬೇಕಾಗಿದೆ, ಆದರೆ ಅದು ಮತ್ತೆ ಬೊಂಬೆಯ ಮನೆಗಲ್ಲ" (In the Second stage, The Path that Ibsen's Nora walked to find herself in the world after she slammed that door takes her full circle back but it's no longer to a Doll's House. [P. 81, The second stage.]

ಫಿಮಿನಿಸಂ ಪ್ರಪಂಚದ ರಾಜಕೀಯ ವಿಷನ್ ಆಗಬೇಕಾದರೆ ಅದು ಮಹಿಳೆಯ ಮಾತ್ರವಲ್ಲ, ಮಾನವೀಯತೆಯ ವಿಷನ್ನನ್ನು ಒಳಗೊಳ್ಳಬೇಕಾಗಿದೆ ಎಂಬುದಾಗಿ ನುಡಿಯುತ್ತಾರೆ. ಈ ರೀತಿಯ ವಿಶ್ಲೇಷಣೆಗಳು ಈಗ ಯಾಕೆ ಭೆಟ್ಟಿ ಫ್ರೀಡನ್‌ರವರಲ್ಲಿ ಕಾಣಿಸಿಕೊಳ್ಳುತ್ತವೆ ಎಂಬುದನ್ನು ನಾವು ಗಮನಿಸಬೇಕು. ಕುಟುಂಬದ ಚೌಕಟ್ಟಿನಲ್ಲಿಯೇ ಮಾನವೀಯತೆಯ ಉಳಿವು ಎಂಬುದನ್ನು ಯಾಕೆ ಇಂದು ವಿಜೃಂಭಿಸಿ [Glorify] ಹೇಳುತ್ತಿದ್ದಾರೆ ಇದೇ ಬದುಕಿನ ಸತ್ಯ ಎನ್ನುವ ಹಾಗೆ ಯಾಕೆ ಇವರು ನುಡಿಯುತ್ತಾರೆ?

1. 'ದಿ' ಫೆಮಿನೈನ್ ಮಿಸ್ಟಿಕ್ ಪುಸ್ತಕದಲ್ಲಿ ಕಾಣಿಸಿಕೊಂಡ ರೀತಿಯ ಐತಿಹಾಸಿಕವಲ್ಲದ ಪಿತೃಪ್ರಧಾನ ಸಂಸ್ಕೃತಿಯ ಸೈದ್ಧಾಂತಿಕ ಮಿತಿಗಳೇ?

2. ಮೂರನೇ ಜಗತ್ತಿನ ಮಹಿಳಾ ಚಳವಳಿಗೆ ಅನಿವಾರ್ಯವಾಗಿರುವ ರಾಜಕೀಯ ವಿಷನ್‌ನಂತೆ, ಯಾವುದೇ ರಾಜಕೀಯ ವಿಷನ್ನಿನ ಅನಿವಾರ್ಯತೆ ಅಮೆರಿಕೆಯ ಫೆಮಿನಿಸಂಗೆ ಇಲ್ಲದಿರುವ ಕಾರಣವೇ?

3. ಅನಾಥಪ್ರಜ್ಞೆ, ಒಂಟಿತನ, ಅಶಾಂತಿಗಳು ಮಾನವ ಜೀವನದ ಮೂಲಭೂತ ಸತ್ಯಗಳು ಎಂಬುದನ್ನು ಒಪ್ಪಿಕೊಳ್ಳದಿರುವುದೇ?

4. ನಿಮಿಷ, ನಿಮಿಷಕ್ಕೆಬದಲಾಗುವ ಬಂಡವಾಳಶಾಯಿ ಸಮಾಜ ಅಮೆರಿಕಾದ ನಿರ್ಧಿಷ್ಟ ಸಮಾಜ ರಚನೆಯಲ್ಲಿ ಹುಟ್ಟಿಕೊಂಡ ಅಶಾಂತಿಯು ಕಾರಣವೇ?

5. ಅಮೆರಿಕಾದ ಇಂದಿನ ಆರ್ಥಿಕ-ಗತಿ-ಸ್ಥಿತಿಗಳಲ್ಲಿ ಹುಟ್ಟಿಕೊಂಡ ವಿಚಾರಗಳೇ?

'ದಿ ಸೆಕೆಂಡ್ ಸ್ಟೇಜ್'ನ್ನು ಈ ರೀತಿಯ ಪ್ರಶ್ನೆಗಳ ಹಿನ್ನೆಲೆಯಲ್ಲಿ ಅರ್ಥೈಸುವ ಅಗತ್ಯ ಮೂರನೇ ಜಗತ್ತಿನ ಮಹಿಳಾ ಹೋರಾಟಗಳಿಗೆ ಅವಶ್ಯಕ ಎನ್ನಿಸಿದ್ದರಿಂದ ಈ ಪ್ರಶ್ನೆಗಳನ್ನು ಇಲ್ಲಿ ಎತ್ತುತ್ತಿದ್ದೇನೆ.

'ದಿ ಫೆಮಿನೈನ್ ಮಿಸ್ಟಿಕ್' ಅದರ ಎಲ್ಲಾ ಮಿತಿಗಳಲ್ಲೂ ಅರವತ್ತರ ದಶಕದಲ್ಲಿ ಮಹಿಳಾ ಚಳವಳಿಗಳಲ್ಲಿ ಸಾಕಷ್ಟು ಸ್ಫೂರ್ತಿಯನ್ನು ಹುಟ್ಟು ಹಾಕಿದೆ. ಜಗತ್ತಿನ ಎಲ್ಲೆಡೆಗಳಲ್ಲಿ ಹೆಣ್ತನದ ನಿಗೂಢತೆಯ ಕೊಂಡಿಗಳು ಇನ್ನು ಬಲವಾಗಿ ಕಚ್ಚಿಕೊಂಡಿರುವ ಸಂದರ್ಭದಲ್ಲಿಯೋ ಯಾವುದೇ ಸಂದರ್ಭದಲ್ಲೂ ಪುರುಷ ನಿರ್ಮಿತ ಇತಿಹಾಸ ಅಮೆರಿಕೆಯಲ್ಲಿ ಮತ್ತೆ ತಲೆ ಎತ್ತಬಹುದು. ನಲವತ್ತರ ದಶಕದ ರೀತಿ ರಾಜಕೀಯ, ಮಾನವೀಯತೆ, ಆರ್ಥಿಕ ಹೆಸರುಗಳ ಹಿನ್ನೆಲೆಯಲ್ಲಿ ಸಮಾಜದ ಭದ್ರತೆ ಕಾಪಾಡಲು ಮಹಿಳೆಯರನ್ನು ಹೆಣ್ತನದ ನಿಗೂಢತೆಗೆ ಮತ್ತೆ ದೂಡಬಹುದು. ಇದಕ್ಕೆ ಮೊದಲು ಭೆಟ್ಟಿ ಫ್ರೀಡನ್ 'ದಿ ಸೆಕೆಂಡ್ ಸ್ಟೇಜ್'ನಲ್ಲಿ ತಾವೇನು ಹೇಳುತ್ತಿದ್ದೇವೆ ಎಂಬುದರ ಬಗ್ಗೆ ಜಾಗ್ರತರಾಗಬೇಕು ಅಮೆರಿಕಾದ ಮಹಿಳೆಯಾಗಿ ಅಲ್ಲ-ಪ್ರಪಂಚದ ಇತಿಹಾಸದ ಮಹಿಳೆಯಾಗಿ.


ಗ್ರಂಥ ಋಣ

1. 'ದಿ ಫೆಮಿನೈನ್ ಮಿಸ್ಟಿಕ್' 1963
2. 'ದಿ ಸೆಕೆಂಡ್ ಸ್ಟೇಜ್' - 1982 ಭೆಟ್ಟಿ ಫ್ರೀಡನ್
3. ಸೈಕೋ ಅನಾಲಿಸಿಸ್ 1974
4. ವಿಮೆನ್ಸ್ ಎಸ್ಟೇಟ್ - 1971 ಜ್ಯೂಲಿಯೆಟ್ ಮಿಷಲ್
5. Functionalism: Excerpted from Sisters and wives, the Past and Future of sexual qauality

–Sacks Karen


# ನೀವು ಏನು ಹೇಳುತ್ತೀರಿ... ?

ಹುಡುಗಿ ಹೇಳುತ್ತಾಳೆ–
ನನ್ನೆಲ್ಲ ಆಸೆಗಳಿಗೆ ಕಡಿವಾಣವಿತ್ತು
ಸುಂದರ ವಸಂತಗಳಿಗೆ
ಕನವರಿಸಿದಾಯ್ತು,
ಅಂತ್ಯಕಾಣದ ತೀರ್ಮಾನಗಳ
ಪ್ರಕ್ರಿಯೆಗಳಿಗೆ ನಿಟ್ಟುಸಿರುಡುತ್ತಾ
ದಿಂಬು ಅಪ್ಪಿದ್ದಾಯ್ತು.
ತೇಪೆ ಹಾಕಿದ ಜನತಾ ಸೀರೆಯಲ್ಲೇ
ಕರಿಕಾದ ಮನೆಯ ಜಂತಿ
ಎಣಿಸಿದಾಯ್ತು
ಸಾಕು
ನರಳಿ ನರಳಿ ನನ್ನಪ್ಪನ ಮನೆಯಲ್ಲಿ
ಕೊಳೆತದ್ದು ಇಂದಿಗೇ ಸಾಕು
ಇನ್ನಾದರೂ,
ಮೂಲೆ ಸೇರಿದ ಕಾಗದ
ಪೆನ್ನುಗಳ ಧೂಳೊರೆಸಬೇಕು....
ಸುಕ್ಕು ಸುಕ್ಕಾಗಿ ಮುದುಡಿದ
ಭಾವನೆಗಳಿಗೆ ಇಸ್ತ್ರಿ ಹಾಕಬೇಕು....
ಪೆಟ್ಟಿಗೆಯಲ್ಲಿ ಕಟ್ಟಿಟ್ಟ ತೆಳ್ಳಗಿನ
ಸೀರೆಗಳ ಒಪ್ಪವಾಗಿ ಉಟ್ಟುಕೊಳ್ಳಬೇಕು....
ನನಗೆ ಚೆನ್ನಾಗಿ ಗೊತ್ತು....ಆಗ
ಆಕಾಶ ಕೆಂಪಗಾಗಿ ಬಿಸಿ ನೀರ
ಮಳೆಯಾಗುತ್ತದೆ
ಬಿರುಗಾಳಿ ಕೆರಳಿದ ಗೂಳಿಯಾಗುತ್ತದೆ
ಸಮುದ್ರ ಹುಚ್ಚೆದ್ದು ಚುಂಬನಕ್ಕೆ
ತುಟಿ ಸವರುತ್ತದೆ.
ಆದರೂ....
ನಾನು ಹೊರಡುತ್ತೇನೆ
ವಸಂತದ ಸಮಾಗಮಕ್ಕೆ....
ಭವಿಷ್ಯತ್ತಿನ ರಾಗ ಸಂಗಮಕ್ಕೆ

● ಗುಲಾಬಿ ಬಿಳಿಮಲೆ

# ಯೋಜನಾ ರಂಗದಲ್ಲಿ ಮಹಿಳೆ
# ದುರ್ಗಾಬಾಯಿ ದೇಶ್‌ಮುಖ್



ರಾಜಕೀಯ ಹಾಗೂ ಸಮಾಜ ಸೇವೆಯಲ್ಲಿ ಅಪಾರ ಆಸಕ್ತಿ ಹೊಂದಿದ್ದ ದುರ್ಗಾಬಾಯಿ ದೇಶಮುಖ್ ಜುಲೈ 15, 1909ರಂದು ಆಂಧ್ರದ ರಾಜಮಹೇಂದ್ರಿಯಲ್ಲಿ ಜನಿಸಿದರು. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದ ಇವರು ಉಪ್ಪಿನ ಸತ್ಯಾಗ್ರಹ ಸಂದರ್ಭದಲ್ಲಿ 3 ವರ್ಷ ಸೆರೆಮನೆವಾಸ ಅನುಭವಿಸಿದರು. ಕೌನ್ಸಿಲ್ ಫಾರ್ ಸೋಷಿಯಲ್ ಡೆವೆಲಪ್‌ಮೆಂಟ್‌ನ ನಿರ್ದೇಶಕಿ ಹಾಗೂ ಮದರಾಸಿನ ಅಖಿಲ ಭಾರತ ಸಮಾಜ ಕಲ್ಯಾಣ ಮಂಡಲಿ ಅಧ್ಯಕ್ಷರಾಗಿ ಸ್ತ್ರೀಯರ ಹಿತಸಾಧನೆಗಾಗಿ ಶ್ರಮಿಸಿದರು. ಅವರು ಮದರಾಸಿನ ಆಂಧ್ರ ಮಹಿಳಾ ಸಭಾದ ಸ್ಥಾಪಕ ಸದಸ್ಯೆ ಹಾಗೂ ಭಾರತದ ರೆಡ್‌ಕ್ರಾಸ್ ಸೊಸೈಟಿ ಸದಸ್ಯೆಯೂ ಆಗಿದ್ದರು.

ಹತ್ತೊಂಬತ್ತನೆ ಶತಮಾನದ ಉತ್ತರಾರ್ಧದಲ್ಲಿ ಆಗಷ್ಟೇ ಕುಡಿಯೊಡೆಯುತ್ತಿದ್ದ ಸಮಾಜ ಸುಧಾರಣಾ ಚಳವಳಿ ಭಾರತೀಯ ಮಹಿಳೆಯರಿಗೆ ತಮ್ಮ ಹಕ್ಕುಗಳು ಹಾಗೂ ಹೊಣೆಗಾರಿಕೆಗಳ ಬಗ್ಗೆ ಹೆಚ್ಚು ಜಾಗೃತರಾಗುವಂತೆ ಮಾಡಿತು. ಸಾಮಾಜಿಕ ಬದುಕಿನ ಎಲ್ಲಾ ಆಯಾಮಗಳಲ್ಲಿ ಮಹಿಳೆಗಿರುವ ವ್ಯಾಪಕ ತೊಡಕುಗಳು ನಿವಾರಣೆಯಾಗದೆ, ಸ್ವಾತಂತ್ರ್ಯದೆಡೆ ಸಮಗ್ರ ರಾಷ್ಟ್ರದ ಪ್ರಗತಿಯೂ ಕುಂಠಿತವಾಗುತ್ತದೆ ಎಂಬ ಅಂಶ ಮನದಟ್ಟಾಯಿತು. ಮಹಿಳೆಯರು ಅದರಲ್ಲೂ ಬಾಲವಿಧವೆಯರು ಹಾಗೂ ಸಾಮಾಜಿಕ ರಕ್ಷಣೆಯಿಲ್ಲದ ಮಹಿಳೆಯರ ಸ್ಥಾನಮಾನದ ಬಗ್ಗೆ ಈ ಚಳವಳಿ ವ್ಯಾಪಕ ಪರಿಣಾಮ ಬೀರಿದ್ದರಲ್ಲಿ ಅಚ್ಚರಿಯಿಲ್ಲ. ಈ ಅವಧಿಯಲ್ಲಿ ಪ್ರತಿಪಾದಿಸಲಾದ ಹಾಗೂ ಯತ್ನಿಸಲಾದ ಕ್ರಮಗಳಲ್ಲಿ, ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಅವಕಾಶ ನೀಡಲಾಯಿತು.

ಸ್ವಾತಂತ್ರ್ಯಾನಂತರದ ದಶಕದಲ್ಲಿ, 1950 ರಲ್ಲಿ ಜಾರಿಗೆ ಬಂದ ಸಂವಿಧಾನದಿಂದ ಭಾರತೀಯ ಮಹಿಳೆಯರು ಪುರುಷರ ಜತೆ ಸಂವಿಧಾನಾತ್ಮಕ ಸಮಾನತೆಯ ಸ್ಥಾನಗಳಿಸಿಕೊಂಡಿದ್ದರೂ, ಬೇರೆ ಬಗೆಗಳಲ್ಲಿ ಅಸಮಾನತೆ ಇನ್ನೂ ಇದೆ. ಆದರೂ 1952ರ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ತಮ್ಮ ಹೊಸ ಸ್ಥಾನಮಾನದ ಪೂರ್ಣ ಪ್ರಯೋಜನ ಪಡೆದುಕೊಂಡು ಹೆಚ್ಚಿನ ಸಂಖ್ಯೆಯಲ್ಲೆ (ಮತದಾರರಲ್ಲಿ ಶೇಕಡ 45ರಷ್ಟು ಮಂದಿ ಮಹಿಳೆಯರಾಗಿದ್ದರು) ಮತದಾನ ಮಾಡಿದರು. ಇತರ ಸಾಮಾಜಿಕ ನ್ಯೂನತೆಗಳನ್ನು ಕ್ರಮವಾಗಿ ಹಿಂದೂ ಅಪ್ರಾಪ್ತ ವಯಸ್ಕತೆ ಮತ್ತು ಉತ್ತರಾಧಿಕಾರ ಕಾಯಿದೆ, ಹಿಂದೂ ವಿವಾಹ ಕಾಯಿದೆ ಹಾಗೂ ಇತರ ಪ್ರಗತಿಪರ ಕಾನೂನು ಕಾರ್ಯಕ್ರಮಗಳಿಂದ ತೊಡೆದುಹಾಕಲಾಯಿತು.

ಮಹಿಳೆಯರ ಪ್ರಗತಿಯೂ ಸೇರಿದಂತೆ ಆರ್ಥಿಕ ಸುಧಾರಣೆ ಹಾಗೂ ಪ್ರಗತಿಗಾಗಿ ರಾಜಕೀಯ ಸ್ವಾತಂತ್ರ್ಯ

ವನ್ನು ರಚನಾತ್ಮಕವಾಗಿ ಹಾಗೂ ಸೃಜನಾತ್ಮಕವಾಗಿ ಬಳಸಿಕೊಳ್ಳುವುದು ಎಂಬ ಸಮಸ್ಯೆ ಸ್ವತಂತ್ರ ಭಾರತ ವನ್ನು ಮುಖ್ಯವಾಗಿ ಕಾಡುತ್ತದೆ. ಆರ್ಥಿಕ ಪ್ರಗತಿ ಹಾಗೂ ಸಮಾಜ ಸುಧಾರಣೆಯ ನಡುವಿನ ನಿಕಟ ಸಂಬಂಧವನ್ನು ಸರಕಾರ ಗುರುತಿಸಿದೆ. ಇದಕ್ಕೆ ರಾಜ್ಯ ನೀತಿಯ ಸ್ಥಾನಮಾನವನ್ನು ನೀಡಲಾಗಿದೆ. ಇದನ್ನು ಯೋಜನಾ ಆಯೋಗ ಗುರುತಿಸಿದ್ದು, ಪ್ರಥಮ ಪಂಚ ವಾರ್ಷಿಕ ಯೋಜನೆಯಲ್ಲಿ ಸಮಾಜ ಕಲ್ಯಾಣ ಸೇವೆಗೆ ಪ್ರಮುಖ ಸ್ಥಾನ ನೀಡಲಾಗಿದೆ. ಇದರ ನೇರ ಫಲಿತಾಂಶ, ಮೊದಲ ಯೋಜನೆ ಅವಧಿಯಲ್ಲಿ ಕೇಂದ್ರ ಸಮಾಜ ಕಲ್ಯಾಣ ಮಂಡಳಿ ರಚನೆ ಹಾಗೂ ಹೆಚ್ಚಿನ ಮಟ್ಟಿಗೆ ಸರಕಾರೇತರ ಕಾರ್ಯಕರ್ತರು, ಸಂಸ್ಥೆಗಳ ಮೂಲಕ ನಡೆಸಲಾಗುವ ಇದರ ಕಾರ್ಯಕ್ಕೆ 4 ಕೋಟಿ ರೂ.ಗಳ ನೀಡಿಕೆ. ಈಗಾಗಲೇ ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವಂತಹ ಸ್ವಯಂಸೇವಾ ಸಂಸ್ಥೆಗಳು ಹಾಗೂ ಇದರ ಕಾರ್ಯಕರ್ತರ ಸಹಕಾರ ಅಗತ್ಯವೆಂದು ಪ್ರಥಮ ಬಾರಿಗೆ ಪರಿಗಣಿಸಲಾಯಿತು. ಎರಡು ಯೋಜನೆಗಳ ಅನುಷ್ಠಾನದ ಕಳೆದ ಆರುವರ್ಷಗಳ ಅವಧಿಯಲ್ಲಿ ಈ ಪರಿಗಣನೆಗೆ ಹೆಚ್ಚು ಒತ್ತು ನೀಡಲಾಗಿದೆ. ಸಮಾಜ ಕಲ್ಯಾಣ ಕ್ಷೇತ್ರದ ಸಲಹೆಗಳಿಗೆ ಅಂತಿಮ ರೂಪು ನೀಡು ವಲ್ಲಿ ಯೋಜನಾ ಆಯೋಗ ರಚಿಸಿದ ಮಹಿಳಾ ವಿಭಾಗ ದಿಂದ (Women's panel) ಶ್ಲಾಘನೀಯ ಸಹಾಯ ತೆಗೆದುಕೊಳ್ಳಲಾಗಿದೆ. ಭಾರತದಲ್ಲಿ ರಾಷ್ಟ್ರೀಯ ಯೋಜನೆಯ ಇತಿಹಾಸ ಬರೆಯಬೇಕೆಂದರೆ, ಯೋಜನೆ ಗಳನ್ನು ರೂಪಿಸುವಲ್ಲಿ, ತಿದ್ದಿ ವ್ಯವಸ್ಥಿತಗೊಳಿಸುವಲ್ಲಿ ಹಾಗೂ ಅನುಷ್ಠಾನಗೊಳಿಸುವಲ್ಲಿ ಮಹಿಳೆಯರ ಮಾರ್ಗ ದರ್ಶಕ ಯತ್ನಗಳಿರುವುದನ್ನು ಎಲ್ಲರೂ ಕಾಣಬಹುದು.

### ಉಳಿತಾಯದ ಬಗ್ಗೆ ಪ್ರಚಾರ

ರಾಷ್ಟ್ರೀಯ ಕ್ಷೇಮಾಭ್ಯುದಯಕ್ಕಾಗಿ ಅಸಂಖ್ಯ ಚಟುವಟಿಕೆಗಳಿದ್ದು, ಪ್ರತಿಯೊಂದು ಮಟ್ಟದಲ್ಲೂ ಸಹ ಕಾರ ನೀಡಲು ಮಹಿಳೆಯರು ಮುಂದೆ ಬಂದಿದ್ದಾರೆ. ಉದಾಹರಣೆಗೆ, ಅನೇಕ ವಿಧದ ಸಮಾಜ ಸುಧಾರಣೆ ಕಾರ್ಯಗಳಲ್ಲಿ ಎರಡು ಮೂರು ದಶಕಗಳ ಕಾಲದ ಅನು ಭವ ಹೊಂದಿದ ಉತ್ಸಾಹಿ ಸ್ವಯಂಸೇವಾ ಕಾರ್ಯಕರ್ತೆ ಯರ ತಂಡವೊಂದು ನಮ್ಮ ಯೋಜನೆಗಳ ಅನುಷ್ಠಾನ ಕ್ಕಾಗಿ ಹಣಗಳಿಸುವ ಸರ್ಕಾರದ ಪ್ರಯತ್ನದ ಬಲವರ್ಧನೆ ಗಾಗಿ ತಮ್ಮನ್ನೇ ಅರ್ಪಿಸಿಕೊಂಡರು. ಮಿತವ್ಯಯ ಹಾಗೂ ರಾಷ್ಟ್ರೀಯ ಉದ್ದೇಶಕ್ಕಾಗಿ ಉಳಿತಾಯದಲ್ಲಿ ಹಣ ತೊಡಗಿಸಬೇಕೆಂಬ ಅಗತ್ಯದ ಸಂದೇಶವನ್ನೂ ಅವರು ರಾಷ್ಟ್ರದ ಮಹಿಳೆಯರಲ್ಲಿಗೆ ಕೊಂಡೊಯ್ದರು. ದಿವಂಗತ ಶ್ರೀಮತಿ ಹನ್ನಾ ಸೇನ್ ಅವರ ಮಾರ್ಗದರ್ಶನ ಪಡೆದ ಮಹಿಳೆಯರ ಉಳಿತಾಯ ಚಳವಳಿಯ ಈ ಸಂಘ ಟನೆ ಹೊಸದೊಂದು ಸಾಮಾಜಿಕ ಚಟುವಟಿಕೆಯಲ್ಲಿ ತೊಡಗಲು ನೂರಾರು ಮಹಿಳೆಯರಿಗೆ ತರಬೇತಿ ನೀಡಿದೆ. ಪ್ರಾಥಮಿಕ ಹಂತದ ತೊಡಕುಗಳು, ತೊಂದರೆಗಳಿ ದ್ದರೂ, ಉತ್ಸಾಹದಾಯಕವಾದ ಆರಂಭ ಮೊದಲು ಗೊಂಡಿತು. ಅಸಂಖ್ಯ ಮಹಿಳೆಯರು ಈ ದಿಸೆಯಲ್ಲಿ ತಮ್ಮ ಸೇವೆ ಸಲ್ಲಿಸಲು ಮುಂದೆ ಬರುತ್ತಿದ್ದಾರೆ. ಈವರೆಗೆ 681 ಅಧಿಕೃತ ಕಾರ್ಯಕರ್ತರನ್ನೊಳಗೊಂಡ 188 ಮಹಿಳಾ ಕ್ಷೇಮಾಭ್ಯುದಯ ಸಂಸ್ಥೆಗಳನ್ನು ಸರ ಕಾರದ "ಏಜೆಂಟ್"ರನ್ನಾಗಿ ನೇಮಕ ಮಾಡಿಕೊಳ್ಳ ಲಾಗಿದೆ. ಅನುಭವದ ಹೆಚ್ಚಳದೊಂದಿಗೆ, ಇನ್ನೂ ಹೆಚ್ಚು ಪರಿಣಾಮಕಾರಿ ಫಲಿತಾಂಶಗಳನ್ನು ನೀಡಲಾರಂಭಿಸಿ ದ್ದಾರೆ ಮಹಿಳೆಯರು.

ಈ ಪ್ರಯತ್ನಗಳನ್ನು ಮೆಚ್ಚಿದ ಹಣಕಾಸು ಸಚಿವಾಲಯ ಚಳವಳಿಯ ವ್ಯಾಪ್ತಿ ಹೆಚ್ಚಿಸಲು ಹಾಗೂ ಏಜೆಂಟ್ ಘಟಕಗಳನ್ನು 200 ರಿಂದ 500ಕ್ಕೇರಿಸಲು ನಿರ್ಧರಿಸಿತು.

ಸ್ವಯಂಸೇವಾ ಮಹಿಳಾ ಕಾರ್ಯಕರ್ತರು ಹಾಗೂ ಕ್ಷೇಮಾಭ್ಯುದಯ ಸಂಸ್ಥೆಗಳಿಗೆ ಮತ್ತೊಂದು ಚಟುವಟಿ ಕೆಯ ಕ್ಷೇತ್ರ ಕುಟುಂಬ ಯೋಜನೆ ಸಲಹಾ ಕೇಂದ್ರ ಗಳು ಪ್ರತಿವರ್ಷ 41/2 ದಶಲಕ್ಷ ಜನನ ಸಂಖ್ಯೆ ಏರಿಕೆ ಪ್ರಮಾಣವಿರುವ ಸದ್ಯದ ಸ್ಥಿತಿಯಲ್ಲಿ ಕುಟುಂಬಯೋಜನೆ ಅತ್ಯಂತ ಅಗತ್ಯ. ಕುಟುಂಬ ಕಲ್ಯಾಣದ ಉದ್ದೇಶವೊಂದೇ ಅಲ್ಲ, ಎರಡನೆ ಯೋಜನೆಯಲ್ಲಿ ತಿಳಿಸಿರುವಂತೆ ವ್ಯಕ್ತಿಗತ ಆದಾಯದ ಏರಿಕೆಯೊಂದಿಗೆ ರಾಷ್ಟ್ರೀಯ ಪರಮಾನದಲ್ಲಿ ಪ್ರತಿವರ್ಷ ಶೇಕಡ 5 ರಷ್ಟು ಏರಿಕೆ ಇರುವಂತೆ ಆರ್ಥಿಕ ಅಭಿವೃ ದ್ಧಿಯ ಪ್ರಮಾಣವನ್ನು ಸಾಧಿಸುವ ಅಗತ್ಯವೂ ಇದರ ಮತ್ತೊಂದು ಮುಖ್ಯ ಅಂಶ. ಪ್ರಥಮ ಪಂಚವಾರ್ಷಿಕ

ಯೋಜನೆ ಅವಧಿಯಲ್ಲಿ ಕುಟುಂಬ ಯೋಜನೆಯನ್ನೂ ಸಮಾಜ ಕಲ್ಯಾಣ ಇಲಾಖೆಯು ಪ್ರಮುಖ ಆಯಾಮ ವಾಗಿ ಪರಿಗಣಿಸಿ 65 ಲಕ್ಷ ರೂಗಳನ್ನು ನೀಡಲಾಗಿತ್ತು. ಎರಡನೆ ಯೋಜನೆಯಲ್ಲಿ ಜನಸಂಖ್ಯೆ ಮಿತಗೊಳಿಸಬೇಕಿರುವ ತುರ್ತು ಅಗತ್ಯದಿಂದ ಈ ಯೋಜನೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ಪಡೆದುಕೊಳ್ಳಲಿದೆ. ಅಂದಿನಿಂದ ಸುಮಾರು 495 ಲಕ್ಷ ರೂಗಳನ್ನು ನೀಡಲಾಗಿದೆ. ಶ್ರೀಮತಿ ಧನ್ವಂತ್ರಿ ರಾಮರಾವ್ ಅವರಂತಹ ಪ್ರಮುಖ ಮಹಿಳಾ ಕಾರ್ಯಕರ್ತರನ್ನೊಳಗೊಂಡ ಭಾರತದ ಕುಟುಂಬಯೋಜನಾ ಸಂಘ, ಭಾರತದಾದ್ಯಂತ ಶಾಖೆಗಳನ್ನು ಹೊಂದಿದೆ. ಮುಂದಿನ ಕೆಲವು ವರ್ಷಗಳಲ್ಲಿ ಇಂತಹ ಹಲವಾರು ಮಹಿಳಾ ಕ್ಷೇಮಾಭಿವೃದ್ಧಿ ಸಂಸ್ಥೆಗಳ ರಾಷ್ಟ್ರದ ಕ್ಷೇಮಾಭಿವೃದ್ಧಿಗೆ ಮೌಲಿಕ ಕೊಡುಗೆ ನೀಡುವಂತಹ ಅತ್ಯುತ್ತಮ ಅವಕಾಶ ಹೊಂದಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆ ಸಹಾಯದೊಂದಿಗೆ ಎರಡು ಬೃಹತ್ ಯೋಜನೆಗಳನ್ನು ಆರಂಭಿಸಲಾಗಿದೆ-ಒಂದು ದೆಹಲಿ ಪಟ್ಟಣ ಪ್ರದೇಶದಲ್ಲಿ ಮತ್ತೊಂದು ಮದ್ರಾಸ್ ರಾಜ್ಯದ ರಾಮನಾಥಪುರಂ ಜಿಲ್ಲಾ ಕೇಂದ್ರದಲ್ಲಿ.

## ಕುಟುಂಬ ಕ್ಷೇಮಾಭಿವೃದ್ಧಿ

ಪಟ್ಟಣ ಪ್ರದೇಶಗಳಲ್ಲಿ ಕುಟುಂಬ ಕಲ್ಯಾಣ ಕಾರ್ಯಗಳನ್ನು ತೀವ್ರ ರೀತಿಯಲ್ಲಿ ಕೈಗೊಳ್ಳಲಾಗಿದೆ. ಪಟ್ಟಣ ಪ್ರದೇಶಗಳಲ್ಲಿರುವ ಕಡಿಮೆ ಆದಾಯದ ಕುಟುಂಬಗಳ ಮಹಿಳೆಯರ ಉದ್ಯೋಗಕ್ಕಾಗಿ, ವಾಣಿಜ್ಯ ಹಾಗೂ ಕೈಗಾರಿಕೆ ಸಚಿವಾಲಯದ ಸಹಕಾರದೊಂದಿಗೆ ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿ ಯೋಜನೆಯೊಂದನ್ನು ಸ್ಥಾಪಿಸಿದೆ. ಮಹಿಳೆಯರನ್ನೊಳಗೊಂಡು ವಿಶೇಷವಾಗಿ ಊದಿಸಲಾಗಿರುವ ಆಡಳಿತ ಸಮಿತಿಯ ಮೂಲಕ ಈ ಯೋಜನೆ, ಅನುಷ್ಠಾನ ಕಾರ್ಯವನ್ನೂ ಮಂಡಳಿ ಕೈಗೊಂಡಿದೆ. ಪ್ರಾಥಮಿಕ ಸಮೀಕ್ಷೆ, ತರಬೇತಿ ಮುಗಿದ ನಂತರ, ಈ ಉದ್ದೇಶಕ್ಕಾಗೇ ಸ್ಥಾಪಿಸಲಾಗಿರುವ ಹತ್ತಿರದ ಕಾರ್ಖಾನೆಗಳು, ಮನೆಗಳಲ್ಲಿ ಕೆಲಸ ಲಭ್ಯ, ಬೆಂಕಿಕಡ್ಡಿ, ಖಾದಿ, ಕಸೂತಿ, ಬಟ್ಟೆ ಇತ್ಯಾದಿಗೆ ಸಂಬಂಧಿಸಿದ ಉದ್ಯೋಗಗಳಿಗೆ ಹೆಚ್ಚಿನ ಪ್ರಾಶಸ್ತ್ಯ. ತಯಾರಿಕೆ ಹಾಗೂ ವಿಕೇಂದ್ರೀಕರಣ ಸುಲಭವೆನ್ನುವುದು ಇದಕ್ಕೆ ಕಾರಣ.

ಬೆಂಕಿಕಡ್ಡಿ ಕೈಗಾರಿಕೆಯಲ್ಲಿ ಪ್ರಯೋಗವನ್ನೂ ಈಗಾಗಲೇ ಮಾಡಲಾಗಿದ್ದು, ದೆಹಲಿ, ಹೈದರಾಬಾದ್, ಪುಣೆ ಮತ್ತು ವಿಜಯವಾಡಗಳಲ್ಲಿ ನಾಲ್ಕು ಘಟಕಗಳನೂ ಆರಂಭಿಸಲಾಗಿದೆ, ದೆಹಲಿಯ ಸಹಕಾರ ಸಂಘವೊಂದು ನಡೆಸುತ್ತಿರುವ ಬೆಂಕಿಕಡ್ಡಿ ಕಾರ್ಖಾನೆಯಲ್ಲಿ 500 ಮಹಿಳೆಯರಿಗೆ ಉದ್ಯೋಗ ಒದಗಿಸಲಾಗಿದೆ. ಮನೆಯಲ್ಲೇ ಅನುಕೂಲಕರವಾಗಿ ನಡೆಸಬಹುದಾದಂತಹ ಕೆಲಸಗಳಿಂದ ಪೂರಕ ಆದಾಯಗಳಿಕೆಗೆ ಸಹಾಯಕವಾಗಿದೆ. ಮಹಿಳಾ ಸಮಾಜ ಕಾರ್ಯಕರ್ತರ ಆಡಳಿತ ಸಮಿತಿ ನಡೆಸಿದ ಈ ಪ್ರಯೋಗ, ಸಂಘಟಿತ ಕುಟುಂಬ ಕ್ಷೇಮಾಭಿವೃದ್ಧಿ ಯೋಜನೆಗಳ ಸಾಮರ್ಥ್ಯ ಬಿಂಬಿಸುತ್ತದೆ. ತಾಂತ್ರಿಕ ತರಬೇತಿ, ಹಣಕಾಸು ಹಾಗೂ ಮಾರುಕಟ್ಟೆ ಬಗ್ಗೆ ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ ಅಗತ್ಯ ನೆರವನ್ನೂ ಒದಗಿಸುತ್ತದೆ. ಎರಡನೆ ಯೋಜನೆಯಲ್ಲಿ, ರಾಷ್ಟ್ರದ ವಿವಿಧ ಭಾಗಗಳಲ್ಲಿ ಇನ್ನೂ ಇಂತಹ ಹೆಚ್ಚಿನ ಯೋಜನೆ ಕೈಗೊಳ್ಳುವ ನಿರೀಕ್ಷೆಯಿದೆ.

ಮಾತೃತ್ವ ಮತ್ತು ಮಕ್ಕಳ ಕ್ಷೇಮಾಭ್ಯುದಯಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಅವುಗಳ ಸುಸಂಗತ ಅನುಷ್ಠಾನದಲ್ಲಿ ಮಹಿಳೆಯರು ಹೆಚ್ಚಿನ ಕೆಲಸ ಮಾಡಬಹುದು. ಈಗ ಸದ್ಯಕ್ಕೆ ಭಾರತದಲ್ಲಿ 3168 ತಾಯಿ ಮತ್ತು ಶಿಶು ಕಲ್ಯಾಣ ಕೇಂದ್ರಗಳಿವೆ, 26,000 ಮಿಡ್‌ವೈವ್ಸ್ 12,000 ಆರೋಗ್ಯ ಕಾರ್ಯಕರ್ತರು ಮತ್ತು ಸಮಿತಿಯ 22,000 ನರ್ಸುಗಳಿದ್ದಾರೆ. ಈ ಸಂಖ್ಯೆ ಸಲ್ಪವೂ ಸಾಕಾಗುವುದಿಲ್ಲ. ಎರಡೂ ಯೋಜನೆಗಳಲ್ಲಿ ಸಿಬ್ಬಂದಿ ಸಂಖ್ಯೆ ಏರಿಕೆ ಅಗತ್ಯ ಪ್ರತಿಪಾದಿಸಲಾಗಿದೆ. ವೈದ್ಯರು, ಆರೋಗ್ಯ ಕಾರ್ಯಕರ್ತರು ಮಿಡ್‌ವೈವ್ಸ್ ಮತ್ತು ಹೆರಿಗೆ ಸಹಾಯಕರಿಗೆ ತರಬೇತಿ ತರಗತಿಗಳನ್ನು ನಡೆಸುತ್ತಿರುವ ಆರೋಗ್ಯ ಸಚಿವಾಲಯ ತನ್ನ ಯೋಜನೆಗಳಿಗೆ ಪೂರಕ ಆರೋಗ್ಯ ಸಿಬ್ಬಂದಿ ತರಬೇತಿಗಾಗಿ ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿಗೆ ನೆರವಾಗುತ್ತಿದೆ.

## ಸಮುದಾಯ ಅಭಿವೃದ್ಧಿ

ದೀರ್ಘಕಾಲ ಕಡೆಗಣಿಸಲಾಗಿದ್ದ ಗ್ರಾಮೀಣ ಭಾರತವನ್ನು ದೃಷ್ಟಿಯಲ್ಲಿರಿಸಿಕೊಂಡು ಸಮುದಾಯ ಅಭಿವೃದ್ಧಿ ಯೋಜನೆ ಮೂಲಕ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗೆ ಭಾರತದ ಮೊದಲ ಪಂಚವಾರ್ಷಿಕ ಯೋಜನೆ ಹೆಚ್ಚಿನ ಆದ್ಯತೆ ನೀಡಿತು. ಈ ಕಾರ್ಯಕ್ರಮದ ಒತ್ತು ಸರ್ವಾಂಗೀಣ ಅಭಿವೃದ್ಧಿಯಾಗಿದ್ದರೂ ಭಾರತದಾದ್ಯಂತ ಇದು ಒಂದೇ ಸಮನಾಗಿಲ್ಲ. ಕೃಷಿ ಸುಧಾರಣೆ, ಭೂಮಿಯ ಫಲವತ್ತತೆ ಹೆಚ್ಚು ಕೊಡುವುದು ಈ ಯೋಜನೆಯಲ್ಲಿ ಪ್ರಥಮ ಪ್ರಾಶಸ್ತ್ಯ ಪಡೆಯಿತು. ಹೆಚ್ಚಿನ ಆದ್ಯತೆ ನೀಡಿತು. ಈ ಕಾರ್ಯಕ್ರಮದ ಒತ್ತು, ಸರ್ವಾಂಗೀಣ ಅಭಿವೃದ್ಧಿಯಾಗಿದ್ದರೂ ಭಾರತದಾದ್ಯಂತ ಇದು ಒಂದೇ ಸಮನಾಗಿಲ್ಲ. ಕೃಷಿ ಸುಧಾರಣೆ, ಭೂಮಿಯ ಫಲವತ್ತತೆ ಹೆಚ್ಚು ಕೊಡುವುದು ಈ ಯೋಜನೆಯಲ್ಲಿ ಪ್ರಥಮ ಪ್ರಾಶಸ್ತ್ಯ ಪಡೆಯಿತು. ಹೆಚ್ಚಿನ ಆಹಾರ ಉತ್ಪಾದನೆಯಂತಹ ಪ್ರಾಥಮಿಕ ಸಮಸ್ಯೆಗೆ ಸಾಕಷ್ಟು ಗಮನ ನೀಡಿದ ನಂತರ, ಗ್ರಾಮೀಣ ಜನರ ಇತರ ಅಗತ್ಯಗಳು ಹಾಗೂ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳ ಪರಿಹಾರದತ್ತ ಹೆಚ್ಚಿನ ಪ್ರಯತ್ನ ನಡೆಸಬೇಕಾಯಿತು. ರಾಷ್ಟ್ರೀಯ ಬದುಕಿನ ಸೂಕ್ಷ್ಮರೂಪವಾದ ಮನೆ ತನ್ನದೇ ಆದ ರೂಪ ಪಡೆದುಕೊಳ್ಳುತ್ತಿತ್ತು. ಮನೆಯಲ್ಲಿರುವ ಮಹಿಳೆಯರ ಶಿಕ್ಷಣ ಹೊಂದಬೇಕು ಎಂಬ ಅರಿವೂ ಮೂಡತೊಡಗಿತು.

ರಾಜ್ಯ ನೀತಿಯ ಬದಲಾವಣೆ, ಗ್ರಾಮೀಣ ಬದುಕಿನಲ್ಲಿ ಬದಲಾವಣೆ ಹೆಚ್ಚಿನ ಸಾಧ್ಯತೆಗಳನ್ನೂ ತೆರೆಯಿಲ್ಲದೆ ಗ್ರಾಮೀಣ ಅಭಿವೃದ್ಧಿ ಯತ್ನಗಳಿಗೆ ಹೊಸ ದೃಷ್ಟಿಕೋನ ನೀಡಿತು. ಮಹಿಳೆಯರ ಸಾಮಾಜಿಕ ಶಿಕ್ಷಣ ಒಂದು ಸಮುದಾಯದ ಎರಡು ಪೀಳಿಗೆಗಳಿಗೆ ನೀಡುವ ಶಿಕ್ಷಣಕ್ಕೆ ಸಮ. ಏಕೆಂದರೆ ಮಹಿಳೆಗೆ ಶಿಕ್ಷಣ ನೀಡುವುದರಿಂದ ಇಡೀ ಕುಟುಂಬವೇ ಶಿಕ್ಷಣ ಪಡೆಯುತ್ತದೆ. ಮತ್ತು ಈ ಕಾರ್ಯವನ್ನು ಮಹಿಳಾ ಕಾರ್ಯಕರ್ತರು ಹೆಚ್ಚು ಪರಿಣಾಮಕಾರಿಯಾಗಿ ಹಾಗೂ ಉಪಯುಕ್ತವಾಗಿ ಸಾಧಿಸಬಲ್ಲರು, ಗ್ರಾಮೀಣ ಮಹಿಳೆಯರು ಕುಟುಂಬ ಕಲ್ಯಾಣ ಯೋಜನೆಗಳ ಪೂರ್ಣ ಪ್ರಯೋಜನ ಪಡೆಯಬೇಕಾದರೆ ಅಸಂಖ್ಯ ತಡೆಗಳು, ಪೂರ್ವಾಗ್ರಹಗಳು ಸಾಮಾಜಿಕ, ಕೋಮು ಹಾಗೂ ಪಾರಂಪರಿಕ ಪೂರ್ವಾಗ್ರಹಗಳನ್ನೂ ತೊಡೆಯಬೇಕಾಗುತ್ತದೆ. ಈ ಕಾರ್ಯವನ್ನೂ ಮಹಿಳಾ ಕಾರ್ಯಕರ್ತರು ಹೆಚ್ಚು ಯಶಸ್ವಿಯಾಗಿ ನಿರ್ವಹಿಸಬಲ್ಲರು. ಇವನ್ನೇ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯ 406 ಕ್ಷೇಮಾಭ್ಯುದಯ ವಿಸ್ತರಣೆ ಯೋಜನೆಗಳಲ್ಲಿ ಅನುಸರಿಸಲು ಯತ್ನಿಸಲಾಯಿತು.

ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ 1058 ಸಮುದಾಯ ಅಭಿವೃದ್ಧಿ ಹಾಗೂ ರಾಷ್ಟ್ರೀಯ ವಿಸ್ತರಣಾ ಬ್ಲಾಕ್‌ಗಳನ್ನೂ ತೆರೆಯಲಾಯಿತು. ಎರಡನೆಯ ಯೋಜನೆಯ ಮೊದಲ ವರ್ಷದಲ್ಲಿ ಇನ್ನೂ 740 ಹೆಚ್ಚಾಯಿತು. ಏಪ್ರಿಲ್ 1, 1957ರಿಂದ ಮಹಿಳೆಯರು ಮತ್ತು ಮಕ್ಕಳ ಸೇವೆಗಳಿಗೆ ಸಂಬಂಧಿಸಿದಂತೆ ಕ್ಷೇಮಾಭಿವೃದ್ಧಿ ವಿಸ್ತರಣಾ ಯೋಜನೆಗಳ ಜತೆ ಸಮುದಾಯ ಅಭಿವೃದ್ಧಿ ಘಟಕಗಳನ್ನೂ ಸಮನ್ವಯಗೊಳಿಸುವ ಕಾರ್ಯ ಕೈಗೆತ್ತಿಕೊಳ್ಳಲಾಗಿದ್ದು, ಎರಡನೆ ಯೋಜನೆ ಅಂತ್ಯದೊಳಗೆ ಇಡೀ ಗ್ರಾಮೀಣ ಭಾರತ, ಸಮುದಾಯ ಅಭಿವೃದ್ಧಿ ಯೋಜನೆಗೊಳಪಟ್ಟಿರುತ್ತದೆಂದು ನಿರೀಕ್ಷಿಸಲಾಗಿದೆ.

## ಕೆ. ಜಿ. ಎನ್. ಎಂ. ಟ್ರಸ್ಟ್

ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರ ಕ್ಷೇಮಾಭಿವೃದ್ಧಿ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದ ಕಸ್ತೂರಿ ಬಾ ಗಾಂಧಿ ರಾಷ್ಟ್ರೀಯ(Kasturba Gandi NationalMemorialTrust)ನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಹೆಸರಿಸಲೇ ಬೇಕು. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುವ ಅಸಂಖ್ಯ ಮಹಿಳೆಯರಿಗೆ ತರಬೇತಿ ನೀಡಲು ಟ್ರಸ್ಟ್ ಅಪಾರ ಸಹಕಾರ ನೀಡಿದೆ. ಎರಡನೆ ಯೋಜನೆ ಅಂತ್ಯಕ್ಕೆ 1320 ಕ್ಷೇಮಾಭಿವೃದ್ಧಿ ವಿಸ್ತರಣೆ ಯೋಜನೆಗಳ ಕಾರ್ಯಕ್ರಮಕ್ಕೆ 6,600 ಗ್ರಾಮ ಸೇವತಿಯರ ಅಗತ್ಯವಿದೆ. ರಾಷ್ಟ್ರಾಂತ್ಯ ವ್ಯಾಪಿಸಿರುವ 15 ಕೇಂದ್ರಗಳಲ್ಲಿ ಮೊದಲ ತಂಡದ ತರಬೇತಿಯನ್ನೂ ಜೂನ್ 1955ರಿಂದ ಕಸ್ತೂರಿಬಾ ಟ್ರಸ್ಟ್ ಆರಂಭಿಸಿತು. ಈ ತರಬೇತಿ ಮೇ 1956ಕ್ಕೆ ಮುಕ್ತಾಯವಾಯಿತು, ಇವರಲ್ಲಿ 500 ಮಂದಿಯನ್ನು ವಿವಿಧ ಯೋಜನಾ ಕೇಂದ್ರಗಳಲ್ಲಿ ಗ್ರಾಮ ಸೇವಕಾ ಹುದ್ದೆಗೆ ಸೂಕ್ತರೆಂದು ಆಯ್ಕೆ ಮಾಡಲಾಯಿತು. ಜೂನ್ 1956ರಿಂದ, ತರಬೇತಿ ಕೇಂದ್ರಗಳ ಸಂಖ್ಯೆಯನ್ನೂ 20ಕ್ಕೆ ಏರಿಸಲಾಗಿದೆ. ಈ ಎರಡನೆ ತಂಡದಲ್ಲಿ ಎಲ್ಲ ರಾಜ್ಯಗಳ 965 ಅಭ್ಯರ್ಥಿಗಳು ತರಬೇತಿ ಪಡೆಯುತ್ತಿದ್ದಾರೆ. ಅಸಂಖ್ಯ ಗ್ರಾಮೀಣ ಗೃಹಗಳಿಗೆ ಅಕ್ಷರ ಹಾಗೂ ಜ್ಞಾನದ ಬೆಳಕು ನೀಡುವುದಕ್ಕಾಗಿ ಪ್ರಾಥಮಿಕ ಹಾಗೂ ಸಾಮಾಜಿಕ ಶಿಕ್ಷಣಕ್ಕೆ ಒತ್ತು ನೀಡುವ ಅಗತ್ಯವಿದೆ. ಸಮುದಾಯ ಅಭಿವೃದ್ಧಿ ವಿಭಾಗಗಳು ಹಾಗೂ ಕ್ಷೇಮಾಭಿವೃದ್ಧಿ ವಿಸ್ತರಣಾ ಯೋಜನೆಗಳಲ್ಲಿ, ಅಸಹ್ಯ ಸಾಮಾಜಿಕ ಶಿಕ್ಷಣ ಕೇಂದ್ರಗಳನ್ನೂ ತೆರೆಯಲಾಗಿದೆ. ಸುಮಾರು 400,000 ಗ್ರಾಮಗಳಲ್ಲಿ ಮಹಿಳೆಯರಿಂದಲೇ ಈ ಕೆಲಸ ನಡೆಯುತ್ತಿದೆ.

(ಭಾರತ ಸರಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ ಪ್ರಕಟಣಾ ವಿಭಾಗ, 1958ರ ಜನವರಿ ತಿಂಗಳಲ್ಲಿ ಪ್ರಕಟಿಸಿರುವ "ಭಾರತದ ಮಹಿಳೆಯರು" ಗ್ರಂಥದಲ್ಲಿ ದುರ್ಗಾಬಾಯಿ ದೇಶ್‌ಮುಖ್ ಅವರ ಈ ಲೇಖನ ಪ್ರಕಟವಾಗಿದೆ.) ●

## ಜಗತ್ತು

ಚುಕ್ಕೆ ಮಾಯವಾಗುತ್ತಲೇ
ಗುಬ್ಬಿ ಪಲುಕಿಡುವ
ಬಲಿಯದ ಭಾವನೆಗಳವರು . . .
ಬೀಜ ಬೆಟ್ಟವಾಗುತ್ತಲೇ,
ರಸವೊಸರುತ್ತಲೇ ತಿಳಿಯದೇ
ಕಲಿಯುವವರು. . .
ಎಚ್ಚರಿದ್ದೇವೆಂದು,
ಕೆಂದುಟಿಗಳ ಕಾವಿಗೊತ್ತಿ
ಸುಟ್ಟು ನೊಂದವರು
ಮೇಲೆ ಬಣ್ಣ ಲೇಪಿಸಿ, ನಗುವರು
ಮುಲುಕುವ ಎದೆ, ಕೆಣಕುವ ಕಿಚ್ಚಿಗೆ
ಕಾಡ ಬಯಲಾಗಿಸಿದವರು. . .
ತೃಪ್ತರಾಗದೇ ಮೋಡಕ್ಕೆ ಕೈ ಹಚ್ಚಿ
ಕುಟುಕಿಸಿಕೊಂಡವರು,
ಮುಲಾಮು ಹಚ್ಚಿ,
ಆಮೇಲೆ ಸೆಂಟು ಚಿಮುಕಿಸಿದವರು.
ನಿಟ್ಟುಸಿರ ಸಿರಿಯಲ್ಲಿ ಜೋಳಿಗೆ
ತುಂಬಿದರು,
ಆಶ್ವಾಸನೆ ಜೋಕಾಲಿ ; ಮರವಿಲ್ಲದೇ
ಜೀಕಿದರು, ತೊಯ್ದಾಡಿದರು
ಉನ್ಮಾದದ ಅನಾಹುತಕ್ಕೆ ಹೆದರಿ
ಸುದ್ದಿ ಸದ್ದಿಲ್ಲದೇ ಕರೆಸಿದರು
ನಡು ನಡುವೆ
ಇಲ್ಲವಾದವರ ಗಟ್ಟಿ ಬೇಲಿ ಕಟ್ಟಿ
ಒಳಗಿನದ ಹೊರಗಾಗಿಸಿದವರು,
ಬುಗ್ಗೆ ಬುಗ್ಗೆ ಬೊಕ್ಕಸಕ್ಕೆ ಬೊಗಸೆ ;
ಬೊಬ್ಬೆ, ಹಾಕಿದವರು, ಹಾಕಿಸಿದವರು
ಎಲ್ಲೆಲ್ಲಿಯೂ ಇದ್ದಾರಲ್ಲವೆ ?

● ಆರತಿ ಎಚ್. ಎಸ್.

## ಬ ರ ದ ಮಾ ರಿ

ನಿಗಿ ನಿಗಿಸುಡು ನೆತ್ತಿ
ಕಂಕಳು, ತೊಡೆ
ಎದೆಯು ತಳವೆಲ್ಲಾ
ತುಳುಕಿದ ಬೆವರು,
ಬಿಸಿ ನೀರಿಗೆ
ತೊಯ್ದ ರವಿಕೆ
ಆರಿ ಒಣಗುತ್ತದೆ
ಎಳೆಯುತ್ತ ನಾಲಗೆ
ದಾಹದ ಬೇಗೆಯಲ್ಲೂ
ಮೈ ಒದ್ದೆಯಾಗುತ್ತದೆ
ಏನೇ ಆದರೂ
ಮಕ್ಕರಿ ತುಂಬ ಬೇಕಲ್ಲಾ
ಹುಲ್ಲು ಘಾಟಿಯಲ್ಲಿ
ಎದುರು ನೋಡುವ
ಹೋರಿಯ ದವಡೆಗೆ
ಗರುಕೆಯು ಬೇರು
ಗಟ್ಟಿಯಾದರೂ ಕುರುಕುವ
ಆದರ ದೊಕ್ಕ ತಳ ಕಚ್ಚಿ
ಉಗ್ಗುತ್ತದೆ.
ಕಾನೆಯ ಮದ್ಯೆ
ಮೋಡದ ನೆರಳು
ಬಿರಿದ ಕೆರೆಯು
ಒಡ್ಡು ಹಾದು
ತೆಳ್ಳಗೆ ಬೇಲಿಯೇ ಹೋಯಿತು
ಕುಸುಕುವ ಹೊಟ್ಟೆಯ
ಹಸು ಕುನ್ನಿಗಳು
ಗುಡ್ಲು ಹೊರಗಿನ ಮರದ ಕೆಳಗೆ
ಇಣಕಿ ಕಾಯುತ್ತಿವೆ
ಗುಡ್ಲುಯಾಗಲೇ ಬೇಕು
ಉಡಿಯಲ್ಲಷ್ಟು
ಗೊಡ್ಡಿ ಕತ್ಯಾಳೆ ಗಡ್ಡೆ
ನೆಗ್ಗುತ್ತಿದೆ ಉಸಿರು
ನಿಸೂರಾಗ್ಗುತ್ತಿದೆ ಬಸಿರು.

● ಉತ್ತನೂರು ರಾಜಮ್ಮ ವಿ. ಶೆಟ್ಟಿ
ಚಿಂತಾಮಣಿ

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮೊದಲ ಬಾರಿಗೆ ಬರೆಯಲು ಯತ್ನಿಸುವ ಲೇಖಕಿ-ಲೇಖಕರಿಗಾಗಿ "ಮೌನ ಮಾತಾದಾಗ" ಅಂಕಣವಿದೆ. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನ ವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗೂ ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿ ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

● ಸಂ. ಮಂಡಳಿ

## ಹೆಣ್ಣು ಅಬಲೆಯಲ್ಲ...

ಹೆಣ್ಣು ಹುಟ್ಟುವುದೇ ತಪ್ಪೇನೋ ಎಂಬಂತೆ ಅವಳಿಗೆ ಇದ್ದ ಸೌಂದರ್ಯವೂ ತಪ್ಪೇನೋ ? ಎಂಬ ಪ್ರಶ್ನೆಯನ್ನು ಕೆಲವು ಹೆಣ್ಣು ಮಕ್ಕಳು ಬೇಸತ್ತ ಹೃದಯದಿಂದ ಪಿಸುನುಡಿಯುತ್ತಾರೆ. ಅಂತಹ ಒಂದು ಚಿತ್ರಹಿಂಸೆ ಕೊಟ್ಟು ಹೆಣ್ಣಿಗೆ ಜಿಗುಪ್ಸೆ ಹುಟ್ಟಿಸಿದ ಒಬ್ಬ ಹೃದಯ ಶೂನ್ಯನ ಮಡದಿ ಎನಿಸಿಕೊಂಡು ಪಡಲಾರದ ಕಷ್ಟಪಟ್ಟ ಒಂದು ಹೆಣ್ಣಿನ ಸತ್ಯಕಥೆ ಇಲ್ಲಿದೆ ನೋಡಿ.

ಸಾವಿತ್ರಿ ಒಬ್ಬಳು ಮನೆತನಸ್ಥ, ಮರ್ಯಾದೆಯ ಬಡತನದಿಂದ ಬಂದ ಹೆಣ್ಣು. ಈ ಹೆಣ್ಣು ಮದುವೆಯಾಗುದ ಮೊದಲು ಎಷ್ಟೋ ಆಸೆಗಳನ್ನು ಹೊತ್ತಿದ್ದಳು, ಅವೆಲ್ಲಾ ಮದುವೆಯಾದ ಮರುದಿನದಿಂದಲೇ ಕಿತ್ತೊಗೆಯಲ್ಪಟ್ಟಿತು. ನೋಡಲು ರೂಪವತಿಯಾಗಿದ್ದ ಇನ್ನೂ 25 ವರ್ಷ ವಯಸ್ಸಿನ ಈ ಹೆಣ್ಣನ್ನು ತಂದೆ ಸ್ವಲ್ಪ ದೂರದ ಊರಿನಲ್ಲಿರುವ ತಂದೆ ತಾಯಿ ಮನೆತನವಿರುವ ಒಬ್ಬ ಹುಡುಗನನ್ನು ಹುಡುಕಿ ಮದುವೆ ಮಾಡಿಕೊಟ್ಟರು. ಈ ಮದುವೆಯಾದಂದಿನಿಂದಲೂ ಕಳೆದ ಡಿಸೆಂಬರ್‌ವರೆಗೂ ಆ ಹುಡುಗಿ ಪಡಲಾರದ ಕಷ್ಟಗಳನ್ನು ಪಟ್ಟಳು. ದಿನವಿಡೀ ಹೃದಯ ವಿದ್ರಾವಕಪಾಡುಗೊಂಡು ಕಣ್ಣೀರಿನಲ್ಲಿ ಕೈತೊಳೆಯುವಂತಾಯಿತು. ಆ ಹೆಣ್ಣು ಗಂಡನು ತನ್ನ ಹೆಂಡತಿ ಎಂದು ಒಂದು ದಿನವೂ ಕರೆಯಲೇ ಇಲ್ಲವೆಂದು ಆ ಹೆಣ್ಣಿನ ಆರ್ತನಾದ. ಇಂತಹ ಹೃದಯಶೂನ್ಯನು ಮದುವೆಯಾಗಲು ಯೋಗ್ಯನಲ್ಲವೆಂದು ಎಲ್ಲರೂ ಅಭಿಪ್ರಾಯ ಪಡಬೇಕಾಗುತ್ತದೆ. ಆ ಗಂಡ ಎಂಬುವನು ಈ ಹೆಣ್ಣಿಗೆ ಯಾವ ದಾಂಪತ್ಯ ಸುಖವನ್ನೂ ಮದುವೆಯಾಗಿ 7 ವರ್ಷವಾದರೂ ಒಮ್ಮೆಯೂ ಕೊಡದ ಕ್ರೂರಿ ಎಂದು ಆ ಹೆಣ್ಣೇ ಹೇಳುವಂತಾಗಿದೆ. ಮನಃ ಸ್ಥೈರ್ಯ ಹಾಗೂ ಸಮಾಧಾನದ ಹೆಣ್ಣಾಗಿದ್ದರಿಂದ ಅಂತಹ ಗಂಡನೊಂದಿಗೆ ಸಂಯಮದಿಂದ ಏಳು ವರ್ಷ ಬಾಳಿದ್ದು (ಮನೆಯಲ್ಲಿದ್ದು) ಆಶ್ಚರ್ಯ ಮತ್ತು ಹೆಣ್ಣಿನ ಸೌಮ್ಯತೆಯನ್ನು ತೋರಿಸಿಕೊಟ್ಟಿದ್ದಾಳೆ.

ಮನೆಯಲ್ಲಿ ಗಂಡ ಹೆಂಡತಿ ಎಂದೂ ಹೇಳದಿರುವಾಗ ಮತ್ತು ಅತ್ತೆ ಮಾವಂದಿರು ಆ ಕೆಲ್ಸ ಮಾಡು ಈ ಕೆಲಸ ಮಾಡು. ಅದು ಸರಿಯಾಗಿಲ್ಲ ಅದನ್ನ ಮಾಡಿಯೇ ಬಂದು ಊಟ ಮಾಡು ಎಂದೆಲ್ಲ ಗೋಳಿಗೆ ಸಿಲುಕಿದರೂ ತನ್ನ ಮನೆ ಇದು ಬೇರೆಯ ಕೆಲಸವಲ್ಲ, ನಮ್ಮ ಮನೆಯದೇ ಕೆಲ್ಸ ಮಾಡಬೇಕು, ಅತ್ತೆ ಹೇಳುವುದೂ ಸರಿ ಎಂದು ಹೊಟ್ಟೆಗೆ ಹೊತ್ತಿಗೆ ಸರಿಯಾಗಿ ಊಟವನ್ನೂ ಮಾಡದೆ ಕೆಲಸ ಮಾಡುತ್ತಿದ್ದಳು. ಗಂಡನೇ ದೇವರೆಂದು ಅವನ ಯಾವ ಕೋಪಕ್ಕೂ ಏಟಿಗೂ ಪ್ರತಿ ತೋರಿಸದೆ ಸಂಯಮದಿಂದ ಈ ಹೆಣ್ಣು ಬಾಳುತ್ತಿದ್ದಳು.

ಈ ರೀತಿ ಆ ಗಂಡು ತನ್ನ ಹೆಂಡತಿಯನ್ನು ತುಚ್ಛವಾಗಿ ಕಾಣಲು ಬಲವಾದ ಕಾರಣ ಒಂದಿತ್ತು. ಇವನು ಮದುವೆಗೆ ಮುಂಚೆಯೇ ತನ್ನ ಮನೆಯ ಹತ್ತಿರದಲ್ಲೇ ಇದ್ದು ತಮ್ಮ ಮನೆಯ ಕೆಲಸ ಮಾಡುತ್ತಿದ್ದ ಒಂದು ಹುಡುಗಿಯನ್ನು ಪ್ರೀತಿಸಿ ಆ ಹೆಣ್ಣಿಗೆ ಮೂರು ಮಕ್ಕಳನ್ನೂ ಕೊಟ್ಟಿದ್ದ, ಆ ನಂತರ ತನ್ನ ಘನತೆ, ಮಾನ ಮನೆತನದ ಗೌರವಕ್ಕೆ ಧಕ್ಕೆ ಬರುತ್ತದೆಂದು ತನ್ನ ಅಪ್ಪ-ಅಮ್ಮರ ಬೇಡಿಕೆಯಂತೆ ಬೇರೆ ಹುಡುಗಿಯನ್ನು ಮದುವೆ

ಯಾಗಲು ಒಪ್ಪಿ ನಾಟಕ ಮಾಡಿದ. ಈ ಮದುವೆಯಾದ ಹೆಣ್ಣಿನ ಬಾಳನ್ನೇ ಚೂರುಚೂರು ಮಾಡಿದ ಸ್ವಾರ್ಥಿ ಗಂಡು ಎನಿಸಿಕೊಂಡವನು ಈ ರೀತಿಯ ಅಪಮಾನ ಕರ ಸಂಗತಿಗಳನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಈ ಹೆಣ್ಣು ತನ್ನ ಗಂಡನೇ ದೇವರು ಎಂದು ನಂಬಿ ತನ್ನ ಸರ್ವಸ್ವವನ್ನೂ ಅವನಲ್ಲೇ ಅರ್ಪಿಸಿದಂತಹ ಹುಡುಗಿಗೆ ಗಂಡ ಒಮ್ಮೆಯೂ ಪ್ರೀತಿ ತೋರದಿರುವುದು ಆ ಹೆಣ್ಣಿನ ಕಣ್ಣೀರ ಕವನವಾಗಿದೆ,

ಈಗ ಕಳೆದ ನವೆಂಬರ್ 1986ರಲ್ಲಿ ಈ ಹೆಣ್ಣನ್ನು ತವರು ಮನೆಗೆ ಕಳುಹಿಸಲಾಯಿತು. ಅಂದಿನಿಂದ ಗಂಡನ ಮನೆಗೆ ಆ ಹೆಣ್ಣು ಬರಲೇ ಇಲ್ಲ. ಯಾವ ಘನತೆ ಗಾಗಿ ಬರಬೇಕು. ಆ ಹೆಣ್ಣಿನಜೀವನದಗೋಳು ಹೃದಯ ವಿರುವವರಿಂದ ನೋಡಲು ಸಾಧ್ಯವಿಲ್ಲ. ಈಗ ಸಾವಿತ್ರಿಯ ಗಂಡನನ್ನು ತಂದೆ ತಾಯಿ ಮನೆಯಿಂದ ಬೇರೆ ಇಡುವ ನಾಟಕ ಮಾಡುತ್ತಿದ್ದುದಲ್ಲದೆ ಈ ಹೆಣ್ಣಿನ ಬಾಳಿಗೆ ಮಸಿ ತರಲು ಅವಳೇ ಓಡಿ ಹೋದಳೆಂದೂ ಹೇಳುತ್ತಿದ್ದಾರೆ. ಇವಳ ಸಂಪರ್ಕ ಕಡಿದುಕೊಳ್ಳಲು ಅವಳಿಗೆ ಒಂದು ಚಿಕ್ಕಾಸಿನಷ್ಟು ಜಮೀನು ಕೊಡುವುದಾಗಿ ತೀರ್ಮಾನಿಸಿದ್ದಾರೆ.

ಈಗ ಆ ಹುಡುಗಿಗೆ ಗಂಡನ ಪ್ರೀತಿ ಇಲ್ಲದ ಮೇಲೆ ಈ ಆಸ್ತಿ ಏಕೆ? ಅವಳೀಗ ಸ್ವತಂತ್ರವಾಗಿ ತನ್ನ ಕಾಲ ಮೇಲೆ ತಾನು ನಿಂತು ಹೆಣ್ಣು ಗಂಡಿಗೆ ಸಮಾನ, ಅಬಲೆ ಯಲ್ಲ ಎಂದು ತೋರಿಸಿ ಕೊಟ್ಟಿದ್ದಾಳೆ. ಈಗ ಈ ಹೆಣ್ಣು ಬೆಂಗಳೂರಿನ ಒಂದು ಖಾಸಗಿ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಾಳೆ.

ಈ ರೀತಿಯಿಂದೆಲ್ಲಾ ಹೆಣ್ಣಿನ ಶೋಷಣೆ ನಡೆಯುತ್ತಾ ಇದೆ. ಇದನ್ನು ಸರಿಯಾದ ದಾರಿಗೆ ತಂದು ಗಂಡಿಗೆ ಹೆಣ್ಣೆಂದರೇನೆಂದು ಅರ್ಥ ಮಾಡಿಸುವುದು ಸಾವಿತ್ರಿಯಂತಹ ಹೆಣ್ಣಿನಿಂದ ಮಾತ್ರ ಸಾಧ್ಯ.

ಈ ಲೇಖನದಲ್ಲಿ ಬರುವ ಎಲ್ಲಾ ಸಂದರ್ಭಗಳೂ ಸತ್ಯ ಸಂಗತಿ ಮತ್ತು ನಡೆದ ಘಟನೆಗಳಾಗಿದ್ದು ಇದರಲ್ಲಿ ಬರುವ ಹೆಸರುಗಳನ್ನು ಬದಲಿಸಲಾಗಿದೆ.

ಎಚ್. ಎಸ್. ಅಶೋಕ ಕುಮಾರ್

---

# ಯಾವ ಪಾಪಕೆ ಸಾವು ಕಾದಿದೆ ?

---

ಅಂದು ಭಾನುವಾರವಾದ್ದರಿಂದ ಎಲ್ಲಾ ಕೆಲಸಗಳನ್ನೂ ಮುಗಿಸಿ ಗೆಳತಿ ವಾಸಂತಿಯ ಮನೆಗೆ ಹೋಗೋಣವೆಂದುಕೊಂಡಿದ್ದೆ. ಆದರೆ ಇನ್ನೇನು ನಾನು ಹೊರಡಬೇಕೆನ್ನುವಷ್ಟರಲ್ಲಿ ಅವಳೇ ಬಂದಳು. ದುಃಖ, ಉದ್ವೇಗಗಳಿಂದ ಕಂಪಿಸುತ್ತಿದ್ದ ಅವಳನ್ನು ಕಂಡು ನನಗೆ ಗಾಬರಿಯಾಯಿತು. ತಡೆಯಲಾರದೆ "ವಾಸಂತಿ ಏನಾಯಿತೇ?" ಎಂದು ಕೇಳಿದೆ. ಸುನಿತಾ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ.... ಎಂದು ಬಿಕ್ಕತೊಡಗಿದಳು. ನನಗೆ ದಿಗ್ಭ್ರಮೆಯಾಯಿತು. ನಿನ್ನೆ ಬೆಳಿಗ್ಗೆ ನನ್ನ ಜೊತೆಯಲ್ಲಿ ನಗುನಗುತ್ತಾ ಮಾತಾಡಿದ ಸುನಿತಾ ಇನ್ನಿಲ್ಲ! ನಂಬುವುದೇ ಕಷ್ಟವಾಯಿತು. ಒಂದೂವರೆ ವರ್ಷಗಳಿಂದ ನಮ್ಮ ಕಾಲೇಜು ಸಹಪಾಠಿಯಾಗಿದ್ದು, ಆತ್ಮೀಯಳಾಗಿದ್ದಳು ಸುನಿತಾ. ಅವಳ ಮುಗ್ಧ ಮುಖ ನೆನಪಾಗಿ ಕಣ್ಣು ಮಂಜಾಯಿತು.

"ಇವತ್ತು ಬೆಳಿಗ್ಗೆ ಹೆಣ ಹೊರತೆಗೆದಿದ್ದಾರಂತೆ. ಬರ್ತೀಯಾ ಹೋಗೋಣ" ಎಂದ ವಾಸಂತಿಯನ್ನು ಮೌನವಾಗಿ ಹಿಂಬಾಲಿಸಿದೆ.

ಸುನಿತಾಳ ಮನೆಯ ಬಳಿ ನಾವು ಹೋಗುವಷ್ಟರಲ್ಲೇ ಜನರು ಗುಂಪುಗುಂಪಾಗಿ ಬರತೊಡಗಿದ್ದರು.ಎಲ್ಲರ ನಡುವೆ ದಾರಿ ಮಾಡಿಕೊಂಡು ನಾವು ಒಳಸುಗ್ಗಿದಾಗ ಕಂಡದ್ದು ನೀರು ತುಂಬಿ ಊದಿಕೊಂಡು ವಿಕಾರವಾಗಿದ್ದ ಸುನಿತಾಳ ಹೆಣ! ನನಗೆ ತಲೆಸುತ್ತಿದಂತಾಗಿ ಬಳಿಯಲ್ಲೇ ಇದ್ದ ವಾಸಂತಿಯನ್ನು ಬಿಗಿಯಾಗಿ ಹಿಡಿದುಕೊಂಡೆ. ಇನ್ನೂ ಹೆಚ್ಚು ಹೊತ್ತು ಅಲ್ಲಿ ನಿಂತಿರುವುದು ದುಸ್ತರವೆನಿಸಿತು. ಬೇಗ ಬೇಗ ಹೆಜ್ಜೆ ಹಾಕಿ ಆ ಗುಂಪಿನಿಂದ ಹೊರಬಂದು ಮನೆಯತ್ತ ಸಾಗತೊಡಗಿದೆವು.

ದಾರಿ ಮೌನವಾಗಿ ಸಾಗಿತು. ಏಕೋ ಏನೋ, ಮಾತನಾಡುವುದೇ ಕಷ್ಟವಾಗಿ ನಾನು ಕೇಳಬೇಕೆಂದಿದ್ದ ಪ್ರಶ್ನೆಗಳೆಲ್ಲಾ ನನ್ನಲ್ಲೇ ಉಳಿದವು. ವಾಸಂತಿಯೇ ಮೌನ ಮುರಿದಳು. ಎರಡು ದಿನದ ಹಿಂದೆ ಸುನಿತಾ ನಮ್ಮ ಮನೆಗೆಬಂದಿದ್ದಳು. ಅವಳ ನೋಟ್‌ಬುಕ್‌ನಲ್ಲಿ ಯಾರೋ "ಐ ಲವ್ ಯೂ" ಎಂದು ಬರೆದಿದ್ದರಂತೆ. ಅದಕ್ಕೆ ಅವರ ಸೋದರ ಮಾವ ಮತ್ತು ಆವರಪ್ಪ ಇಬ್ಬರೂ ಸೇರಿ ಕೊಂಡು "ಅದ್ಯಾವನೇ ಅವನು ಹೀಗೆ ಬರೆದಿರೋದು" ಎಷ್ಟು ದಿನದಿಂದ ನಡೀತಿದೆ ನಿಮ್ಮ ಈ ವ್ಯವಹಾರ? ನಮ್ಮ ಮನೆಯಲ್ಲಿ ಹೆಣ್ಣು ಮಕ್ಕಳನ್ನು ಕಾಲೇಜಿಗೆ ಸೇರಿ ಸಲ್ಲ ಅಂದರೂ ಕೇಳದೆ ಹಟ ಮಾಡಿ ನೀನು ಕಾಲೇಜಿಗೆ ಸೇರಿದ್ದು ಇದಕ್ಕೇನಾ? ಅದ್ಯಾರು ಬರೆದಿರೋದು ಬೊಗಳು" ಎಂದೆಲ್ಲಾ ಬೈದು ದನಕ್ಕೆ ಹೊಡೆಯುವಂತೆ ಹೊಡೆದರಂತೆ. ಪಾಪ ಅವಳಿಗೆ ಗೊತ್ತಿದ್ದರೆ ತಾನೆ ಹೇಳೋದು. ಕಾಲೇಜಿನ ಯಾರೋ ಕಿಡಿಕೇಡಿಗಳು ತಮಾಷೆಗಾಗಿ ಬರೆದಿರಬಹುದು. "ನನಗೆ ಗೊತ್ತಿಲ್ಲಪ್ಪ! ಮಾವಾ, ದೇವರಾಣೆ ನನಗೆ ಗೊತ್ತಿಲ್ಲ" ಎಂದರೂ ಕೇಳದೆ "ಓಹೋ! ನಿನಗೇ ಗೊತ್ತಿಲ್ಲದಂತೆ ನಿನ್ನ ಪುಸ್ತಕದಲ್ಲಿ ಯಾರು ಬರೀತಾರೆ? ಅವನು ಯಾರು ಅಂತ ಹೇಳಿದ್ರೆ ಬದುಕ್ಕೊಂಡೆ. ಇಲ್ಲದಿದ್ದರೆ ನಿನ್ನ ಏನು ಮಾಡ್ತೀನೋ ನೋಡ್ತಿರು" ಎಂದನಂತೆ ಅವಳ ಸೋದರ ಮಾವ, ಅವನಿಗೆ ಸುನೀತಾನ ಕೊಟ್ಟು ಮದುವೆ ಮಾಡಬೇಕು ಅಂತ ಅವರ ಮನೆಯಲ್ಲಿ ತೀರ್ಮಾನವಾಗಿತ್ತಂತೆ. ಅವತ್ತು ಸುನೀತಾ ನನ್ನ ಹತ್ತಿರ ಎಲ್ಲವನ್ನೂ ಹೇಳಿಕೊಂಡು ಅತ್ತಿದ್ದಳು. ಆದರೆ... ಹೀಗೆ ಮಾಡ್ಕೋತಾಳೆ ಅಂತ ನಾನು ಅಂದುಕೊಂಡಿರಲಿಲ್ಲ" ಎಂದಳು ವಾಸಂತಿ.

"ಅಲ್ಲಾ ವಾಸಂತಿ ಯಾವುದೋ ವಿಷಯಕ್ಕೆ ಮನೆಯಲ್ಲಿ ಹೊಡೆದರೂಂತ ಅವಳು ಆತ್ಮಹತ್ಯೆ ಮಾಡಿ ಕೊಂಡದ್ದು ಸರಿಯಾ? ಇನ್ನೇನೂ ದಾರಿಯೇ ಇರ ಲಿಲ್ಲವಾ ಅವಳಿಗೆ?" ಎಂದೆ ನಾನು. ಸುನಿತಾ ದುಡುಕಿದಳೇ ಎಂದೆನಿಸುತ್ತಿತ್ತು ನನಗೆ.

"ಶುಭಾ, ಸುನಿತಾ ತುಂಬಾ ಸೂಕ್ಷ್ಮ ಮನಸ್ಸಿನ ಹುಡುಗಿ ಅಂತ ನಿನಗೇ ಗೊತ್ತು. ಯಾರಾದರೂ ಒಂದು ಮಾತು ಅಂದರೆ ಎಷ್ಟೊಂದು ಬೇಜಾರು ಮಾಡಿಕೊಳ್ಳುತ್ತಿದ್ದಳು. ಅಂತಾದ್ದರಲ್ಲಿ ಒಂದು ಸಣ್ಣ ವಿಷಯಕ್ಕೆ ಇಷ್ಟು ರಂಪಾಟ ಮಾಡಿದರೆ ಅವಳಿಗೆ ಹೇಗಾಗಿರಬೇಡ. ಯಾರಾದರೊಬ್ಬರು ಅವಳ ಪರವಾಗಿ ನಿಂತಿದ್ದರೂ ಅವಳು ಸಾಯುತ್ತಿರಲಿಲ್ಲ. ಆದರೆ ಯಾರೂ ಅವಳ ಪರವಾಗಿ ಮಾತಾಡಲಿಲ್ಲ. ಕೊನೆಗೆ ಡಿಗ್ರಿ ಪಡೆದು ಕೊಂಡ ಅವಳಣ್ಣ ಸಹ. ಅಂಥಾದ್ದರಲ್ಲಿ ಅವಳು ಇನ್ನೇನು ತಾನೆ ಮಾಡುತ್ತಾಳೆ?" ಎಂದು ನಿಟ್ಟುಸಿರು ಬಿಟ್ಟಳು ವಾಸಂತಿ.

ಮತ್ತೆ ಇಬ್ಬರೂ ಮೌನವಾದೆವು. ಆದರೆ ನನ್ನ ತಲೆ ಬಿಸಿಯಾಗತೊಡಗಿತು. ಕೇವಲ ಯಾರೋ "ಐ ಲವ್ ಯೂ" ಎಂದು ಬರೆದದ್ದೇ ಸುನೀತಾಳ ಸಾವಿಗೆ ಕಾರಣವಾಯಿತೆ? ಅವಳಣ್ಣನಿಗಾದರೂ ಇದು ಯಾರೋ ಕಿಡಿಗೇಡಿಗಳ ಕೆಲಸ ಎಂದು ಗೊತ್ತಾಗಲಿಲ್ಲವೇ? ಹೋಗಲಿ ಅವಳ ಅಪ್ಪ-ಅಮ್ಮ, ಮಾವ ಯಾರಿಗೂ ವಿವೇಚನೆ ಬೇಡವೇ? ಹೆತ್ತ ಮಗಳನ್ನೇ ನಂಬದ ಇವರು ಮಾತ್ಯಾರನ್ನು ನಂಬುತ್ತಾರೆ? ಇಷ್ಟೊಂದು ಮುಂದುವರಿದ ಕಾಲದಲ್ಲೂ "ಐ ಲವ್ ಯೂ" ಎನ್ನುವ ಮಾತು ಕಂಡು ಕೆಂಡವಾದರಲ್ಲ ಅವಳ ಅಪ್ಪ, ಮಾವ? ಎಂದೆಲ್ಲ ಪ್ರಶ್ನೆಗಳು ಸುಳಿದಾಡತೊಡಗಿದವು.

ತಟ್ಟನೆ ಇನ್ನೊಂದು ವಿಷಯ ನೆನಪಾಯಿತು. ಇದೇ ಸುನಿತಾಳ ಅಣ್ಣ ಹಿಂದೊಮ್ಮೆ ಯಾರೋ ಹುಡುಗಿಯನ್ನು ಅಶ್ಲೀಲವಾಗಿ ಛೇಡಿಸಿದಾಗ ಅವಳ ಅಪ್ಪ ಜಗಳಕ್ಕೆ ಬಂದಿದ್ದರು ಆದರೆ ಸವಿತಾಳ ಅಪ್ಪ ಮಾತ್ರ ತಮ್ಮ ಮಗ ಏನೂ ಮಾಡೇ ಇಲ್ಲ ಎನ್ನುವಂತೆ ವರ್ತಿಸಿದ್ದರು. ಮಗ ತಪ್ಪು ಮಾಡಿದರೂ ಅವರಿಗೆ ಅದು ತಪ್ಪಾಗಿ ಕಾಣಲಿಲ್ಲ. ಆದರೆ ಮಗಳು ತಪ್ಪು ಮಾಡದಿದ್ದರೂ ಅವಳನ್ನು ತಪ್ಪಿತಸ್ಥೆಯಾಗಿ ಮಾಡಿದ್ದರು. ಇದ್ಯಾವ ನ್ಯಾಯ ಎನಿಸಿತು.

ಪೋಲೀಸರೇನೋ "ಆತ್ಮಹತ್ಯೆ" ಎಂದು ತಮ್ಮ ಕೆಲಸ ಮುಗಿಸಿದ್ದರು. ಆದರೆ ಸುನಿತಾಳದು ಆತ್ಮಹತ್ಯೆಯಲ್ಲ ಕೊಲೆ ಎಂದು ಯಾರಿಗೂ ಅನ್ನಿಸಲಿಲ್ಲವೇಕೆ? ಬಹುಶಃ ಸುನಿತಾಳ ಅಪ್ಪನ ಹಣದ ಪ್ರಭಾವ ವಿರಬಹುದು ಎಂದುಕೊಂಡೆ. ಅಂತೂ ಅರಳಬೇಕಾಗಿದ್ದ ಚೆಲುವಾದ ಹೂವೊಂದು ಮೊಗ್ಗಾಗಿದ್ದಾಗಲೇ ಮಣ್ಣಲ್ಲಿ ಸೇರಿಹೋಯಿತಲ್ಲಾ ಎಂದು ಮನಸ್ಸು ಭಾರವಾಯಿತು. ದೂರದಿಂದ ಒಂದು ಹಾಡು ಕೇಳಿ ಬರುತ್ತಿತ್ತು.

"ಈ ದೇಹದಿಂದ ದೂರವಾದೆ ಯಾಕೆ ಆತ್ಮವೇ, ಈ ಸಾವು ನ್ಯಾಯವೇ?"

ಎ. ಆರ್. ಶುಭಾ



# ಸಂವೇದನೆ

ಅಂದುಕ್ಕಿ ಹರಿದ
ಚಿಲುಮೆ ಬತ್ತಿ
ಬಿರುಕು ನೆಲವಾಯಿತೋ
ನೂರು ಆಶೆಗಳ
ಚಿಗುರು ಸತ್ತು
ಭಣಗುಟ್ಟಿ ಬರಡಾಯಿತೋ....

ಆರು ವರ್ಷದ ಮಗಳು.. ಲವಲವಿಕೆಯ ಕಾರಂಜಿ ಚೇತನವೇ ಮೈವೆತ್ತಂತೆ ಪುಟಿದು ಬರುತ್ತಿದ್ದ ದಿವ್ಯಾ.... ಈಗ ಧುಮ್ಮಿಕ್ಕುವ ಜಲಧಾರೆಯಲ್ಲ, ತೀರಾ ಮಂದ ಗತಿಯಲ್ಲಿ ಜಿನುಗುತ್ತಾ ಬತ್ತಿ ಹೋಗುತ್ತಿರುವ ಕಂಬನಿ.

ಸೋತ ಹೆಜ್ಜೆಯನ್ನಿಡುತ್ತಾ ಬರುವ ದಿವ್ಯಾ, ಚೈತನ್ಯ ತೀರಾ ಅಂಗವಿಕಲವಾಗಿ ತೆವಳಿ ಬರುತ್ತಿದೆಯೋ ಎಂಬಂತೆ ತೋರುತ್ತಾಳೆ. ಹೀಗಾದ ತನ್ನ ಮುದ್ದು ಮಗಳನ್ನು ನೋಡಲಾಗದೇ ತಾಯಿ, ಜಿನುಗಿದ ತನ್ನ ಕಂಬನಿಯನ್ನು ಅಪರಿಚಿತರು ನೋಡುವ ಮೊದಲೇ ಒರೆಸಿ ಮುಖ ತಿರುವುತ್ತಾಳೆ.

ಈ ದೃಶ್ಯವನ್ನು ಮತ್ತೆ ಮತ್ತೆ ಕಣ್ಮುಂದೆ ತರುತ್ತದೆ ಆ ನನ್ನ ಗೆಳತಿಯ ಅಂದಿನ ಮಾತುಗಳು.

ಹೌದು. ಅವಳು ಎಂಥವರನ್ನೂ ಮಂತ್ರಮುಗ್ಧರನ್ನಾಗಿಸುವ ಹಾಡುಗಾರ್ತಿ.. ಕಲ್ಲು ವೀಣೆಗಳಲ್ಲೂ ರಾಗಮಾಧುರ್ಯವನ್ನುಲಿಸಿ....ನಲಿಸುವ ಕೋಕಿಲ ಕಂಠದ ಗಾಯಕಿ.

"ನೀನೇಕೆ ಈಗ ಹಾಡುವುದಿಲ್ಲ.....? ಎಂಬ ನನ್ನ ಪ್ರಶ್ನೆಗೆ ಅವಳಿತ್ತ ಉತ್ತರ.

".....ಅವತ್ತು ನಮ್ಮ ಬ್ಯಾಂಕಿನಲ್ಲಿ ಪ್ರೋಗ್ರಾಂ ಇತ್ತು ನನ್ನ ಸಹೋದ್ಯೋಗಿಗಳ ತೀವ್ರ ಕೋರಿಕೆಗೆ ಮಣಿದು ಹಾಡಲು ಹೋದೆ. ಪ್ರೋಗ್ರಾಂ ಮುಗಿಯುವ ಹೊತ್ತಿಗೆ ಹತ್ತೂವರೆ ಆಗಿ ಬಿಟ್ಟಿತ್ತು... ಈವರೆಗೂ ಎಂದೂ, ಯಾವೊಂದು ಕಾರಣಕ್ಕೂ ಬೈಯದಿದ್ದ ನನ್ನವರು ಚಾಟಿ ಏಟಿಗಿಂತಾ ಹೆಚ್ಚು ನೋವುಕೊಡುವಂಥ ಮಾತುಗಳನ್ನಾಡಿದರು. "ಈವತ್ತೇ ಲಾಸ್ಟ್. ನೀನಿನ್ಯಾವತ್ತಿಗೂ ಯಾವ ಪ್ರೋಗ್ರಾಂಗೂ ಹೋಗಕೂಡ್ದು, ಸಿಕ್‌ಸಿಕ್ಕೋರ್ ಜೊತೆಯಲ್ಲಿ ಹೋಗಿ ಹಾಡ್ಕೊಂಡು ಬರಕ್ಕೆ ಇದೇನು ಸೂಳೆಗಾರಿಕೆ ಕಟ್ಕೊಂಡಿಯಾ....ಇದು ಮರ್ಯಾದಸ್ತರ ಮನೆ, ಹೀಗೆಲ್ಲಾ ಇರೋದಾದ್ರೆ ನೀನು ಮನೆ ಬಿಟ್ ಹೊರಟ್ಹೋಗು"

....ಅವತ್ತಿಂದ ನಾನು ಹಾಡೋದನ್ನೇ ಬಿಟ್ಟು ಬಿಟ್ಟೆ" ಆದರೂ ಎಂದಾದರೊಮ್ಮೆ ಹಾಡುತ್ತಾಳೆ, ಬೇರಾವ ಸಭೆ ಕಾರ್ಯಕ್ರಮಗಳಲ್ಲಿ ಅಲ್ಲ........ಕ್ಷಣಗಳಲ್ಲಿ ನೀರವತೆ ತುಂಬುವ ಮೂಕಜೀವಿಗಳ ಮಧ್ಯೆ. ಅಡಿಗೆ ಮನೆಯ ಸ್ಪಂದನಶೂನ್ಯ ಜಡವಸ್ತುಗಳ ಮಧ್ಯೆ....ಅಡಿಗೆ ಮನೆಯ ಗೋಡೆಗಳಲ್ಲಿ, ಗ್ಯಾಸ್‌ಸ್ಟೌನ ಭುಸುಗುಡುವಿಕೆಯಲ್ಲಿ ಸಾರು-ನೀರುಗಳಲ್ಲಿ, ಕೊತಕೊತನೆ ಕುದಿವ ಲಯಗಳಲ್ಲಿ ಅವಳ ಗಾಯನ ಪರ್ಯವಸಾನ ಹೊಂದುವಾಗ....ಒಂದು ದಿನ ಅವಳು ಯೋಚಿಸಿದ್ದಳು.

"....ನನ್ನ ಮುದ್ದು ಮಗಳು ದಿವ್ಯಾಳ ಭವಿಷ್ಯವೂ ಹೀಗೆ ಆಗಬಹುದಲ್ಲವೇ ? ನಾಳೆ ಅವಳೂ ದೊಡ್ಡ ಕಲಾವಿದೆ ಆಗ್ಬೋದು...ಆಗ ಅವಳ ಗಂಡನೂ....ನನ್ನ ಗಂಡ ನನ್ನನ್ನು ಬೈದ ರೀತಿಯೇ ಬೈಯಬಹುದು. ಅವಳು ಆಗ ನೋವು ತಿನ್ನುವ ಬದಲು, ಅವಳನ್ನು ಈಗಲೇ ಆ ಎಲ್ಲಾ ವಿದ್ಯೆಗಳಿಂದಲೂ ದೂರಮಾಡಿಬಿಟ್ಟರು ? ಸ್ವಲ್ಪ ದಿನ ಮಾತ್ರ ದುಃಖಿಸಿ ಆಮೇಲೆ ಮರೆತುಬಿಡಬಹುದು.

ಮಗಳನ್ನು ಕರೆದು ಹೇಳುತ್ತಾಳೆ- 'ನೀನು ಇನ್ನು ಮೇಲೆ ಡ್ಯಾನ್ಸ್ ಕ್ಲಾಸಿಗಾಗಲೀ, ವೀಣೆ ಕ್ಲಾಸಿಗಾಗಲೀ, ಸ್ಪೋರ್ಟ್ಸ್‌ಗಾಗಲೀ, ಸಂಗೀತಕ್ಕಾಗಲೀ ಹೋಗ್ಬೇಡ .. ನಾನು ಫೀಸ್ ಕೊಡಲ್ಲ.'

'ಯಾಕಮ್ಮಾ? ಯಾಕಮ್ಮಾ ?

ದುಗುಡದಿಂದ, ನೋವಿನಿಂದ ಪ್ರಶ್ನಿಸಿದ ಮಗಳಿಗೆ ಅವಳು ಕೊಟ್ಟ ತೋರಿಕೆಯ ಉತ್ತರ- "ಇನ್ನು ಮೇಲೆ ಚಿಕ್ಕಮಕ್ಕಳಿಲ್ಲಾ ಲೇಟಾಗಿ ಬರ್ಬಾರದಂತೆ, ಮಕ್ಕಳ ಕಳ್ಳರು ಊರಿಗೆ ಬಂದಿದಾರಂತೆ ಅಪ್ಪ ಹೇಳಿದರು"

"ಸರಿ" ಎಂದು ಭಾರವಾದ ದನಿಯಲ್ಲಿ ದಿವ್ಯಾ ಹೇಳಿ ಸುಮ್ಮನಾದಳು.

....ಈಗ ಹಲವಾರು ದಿನಗಳುರುಳಿವೆ. ಆದರೆ ಅವಳ ತಾಯಿಯು ನಿರೀಕ್ಷಿಸಿದಂತೆ, "ಸ್ವಲ್ಪ ದಿನ ಮಾತ್ರ ದುಃಖಿಸಿ ಸುಮ್ಮನಾಗಿಬಿಡಬಹುದು" ಎಂಬುದು ಸುಳ್ಳಾಯಿತು. ದಿವ್ಯಾ, ಕ್ಲಾಸಿನಲ್ಲಿ ಟೀಚರ್ ಪಾಠಮಾಡುವಾಗ ಊಟದ ಡಬ್ಬಿ ಮುಂದೆ ಕುಳಿತಾಗ, ಹೋಂವರ್ಕ್ ಪುಸ್ತಕ ಹಿಡಿದು ಕುಳಿತಾಗ... ವಾಸ್ತವವನ್ನೇ ಮರೆತು ಕುಳಿತುಬಿಡುತ್ತಾಳೆ, ಧಾರಾಕಾರ ಕಂಬನಿ ಸುರಿಸುತ್ತಾ....

● ಸಾವಿತ್ರಿ ಜಿ. ಕೆ.

# ಗಾಂಧಿ ದೃಷ್ಟಿಯಲ್ಲಿ ಹೆಣ್ಣು

ನಾವು, ಎಲ್ಲ ಪುರುಷರು ಎಲ್ಲಿಯವರೆಗೆ ಒಬ್ಬ ಮಹಿಳೆಗಾಗಿ ನಮ್ಮ ಕಾಮವನ್ನು ತ್ಯಾಗಮಾಡಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ನಾಚಿಕೆಯಿಂದ ನಮ್ಮ ತಲೆಯನ್ನು ತಗ್ಗಿಸಬೇಕಾಗಿದೆ. ದೇವರ ಅಪೂರ್ವ ಸೃಷ್ಟಿಯೊಂದನ್ನು ನಮ್ಮ ಕಾಮದ ವಸ್ತುವನ್ನಾಗಿಸಿಕೊಂಡು ಪ್ರಾಣಿಗಳಿಗಿಂತ ನಾವು ಕೆಳಮಟ್ಟಕ್ಕಿಳಿಯುವ ಬದಲು ಮನುಕುಲ ನಾಶವಾಗಿಹೋಗುವುದೇ ಲೇಸು. ಆದರೆ ಇದು ಬರೀ ಭಾರತದ ಸಮಸ್ಯೆ ಅಷ್ಟೆ ಅಲ್ಲ, ಇಡೀ ಪ್ರಪಂಚದ ಸಮಸ್ಯೆಯಾಗಿದೆ. ನಾನು ಎಲ್ಲರನ್ನೂ ಸರಳ ಸ್ವಾವಲಂಬೀ ಜೀವನಕ್ಕೆ ಮರಳಿ ಎಂದು ಕೇಳಿಕೊಳ್ಳುತ್ತೇನೆ. ಏಕೆಂದರೆ ನನಗೆ ಗೊತ್ತು ನಾವು ಸರಳ ಸ್ವಾವಲಂಬೀ ಜೀವನಕ್ಕೆ ಹಿಂದಿರುಗದಿದ್ದರೆ ಕ್ರೂರತೆಯ ಪರಮಾವಧಿಯನ್ನು ತಲುಪುವ ನಮ್ಮ ಅವನತಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಮಹಿಳೆಯರಿಗೆ ಸಂಪೂರ್ಣ ಸ್ವಾತಂತ್ರ ಇರಬೇಕೆಂಬುದು ನನ್ನ ಆಳವಾದ ಆಸೆ. ನಾನು ಬಾಲ್ಯವಿವಾಹವನ್ನು ಖಂಡಿಸುತ್ತೇನೆ. ಬಾಲ ವಿಧವೆಯನ್ನು ನೋಡಲು ನನ್ನ ಮನಸ್ಸು ಮುದುಡುತ್ತದೆ. ಅಲ್ಲದೆ ಆಗತಾನೇ ಹೆಂಡತಿಯನ್ನು ಕಳಕೊಂಡವನು ಮತ್ತೊಂದು ಮದುವೆ ಮಾಡಿಕೊಳ್ಳುವ ಕ್ರೂರಯೋಚನೆಯಲ್ಲಿ ತೊಡಗುವುದನ್ನು ಕಂಡರೆ ಸಿಟ್ಟಿನಿಂದ ಉರಿಯುತ್ತದೆ. ತಂದೆ ತಾಯಿಯರು ತಮ್ಮ ಮಗಳನ್ನು ಅನಕ್ಷರಸ್ಥಳನ್ನಾಗಿಸಿ, ಮೌಢ್ಯದಲ್ಲೆ ಅಡಗಿಸಿ ಬರೀ ಮದುವೆ ಮಾಡಲು ಬೆಳೆಸಲು ಘೋರ ಪಕ್ಷಪಾತವನ್ನು ನಾನು ವಿರೋಧಿಸುತ್ತೇನೆ. ಮಹಿಳೆಯರಿಗೆ ಎಲ್ಲತರದ ಕಾನೂನುಬದ್ಧ ಹಕ್ಕುಗಳಿರಬೇಕು. ಆದರೆ ಸಮಸ್ಯೆ ಇಲ್ಲಿಗೆ ಮುಗಿಯುವುದಿಲ್ಲ. ಅದು ಇಲ್ಲಿಂದ ಅಂದರೆ ಮಹಿಳೆ ದೇಶದ ರಾಜಕೀಯ ಆಯಾಮದಲ್ಲಿ ಪಾಲ್ಗೊಳ್ಳುವಿಕೆಯಿಂದ ಪ್ರಾರಂಭವಾಗುತ್ತದೆ.

ನಾನು ಏನನ್ನು ಹೇಳಬಯಸುತ್ತೇನೆ ಎನ್ನುವುದನ್ನು ಸ್ಪಷ್ಟಪಡಿಸಲು ನನ್ನ ಒಬ್ಬ ಮುಸಲ್‌ಮಾನ್ ಸ್ನೇಹಿತ ಲಂಡನ್‌ನಲ್ಲಿ ಒಬ್ಬ ಹೆಸರುವಾಸಿ ಮಹಿಳೆಯೊಂದಿಗೆ ನಡೆಸಿದ ಸಂಭಾಷಣೆಯನ್ನು ಇಲ್ಲಿ ಹೇಳಬಯಸುತ್ತೇನೆ. ಮಹಿಳಾವಾದಿಗಳ ಒಂದು ಸಭೆಯಲ್ಲಿ ಕುಳಿತ ನನ್ನ ಸ್ನೇಹಿತನನ್ನು ಕಂಡು ಆಶ್ಚರ್ಯಗೊಂಡ ಗೆಳತಿಯೊಬ್ಬಳು ಆತನನ್ನು ಕೇಳಿದಳು. ನೀನು ಇಲ್ಲಿಗೆ ಬರಲು ಎರಡು ಪ್ರಮುಖ ಕಾರಣಗಳಿವೆ ಮತ್ತು ಎರಡು ಸಣ್ಣ ಕಾರಣಗಳಿವೆ ಎಂದು. ಮಗುವಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡ ಅವನು ತಾಯಿಗಾಗಿ ಜೀವನವನ್ನು ಮುಡಿಪಾಗಿಟ್ಟಿದ್ದ. ನಂತರ ಮದುವೆಯಾದ. ಆತ ಮದುವೆಯಾದ ಹುಡುಗಿ, ನಿಜವಾಗಿಯೂ ಆತನ ಬಾಳಸಂಗಾತಿಯಾಗೇ ಬಾಳಿದಳು. ಅವನಿಗೆ ಗಂಡು ಮಕ್ಕಳಿರಲಿಲ್ಲ. ವಯಸ್ಕರಲ್ಲಿದ ಮತ್ತು ಆತ ಗಾಢವಾಗಿ ಪ್ರೀತಿಸುವ ನಾಲ್ಕು ಜನ ಹೆಣ್ಣು ಮಕ್ಕಳಿದ್ದರು. ಹೀಗಿರುವಾಗ ಆತ ಮಹಿಳಾವಾದಿಯಾದದ್ದರಲ್ಲಿ ಆಶ್ಚರ್ಯವೇನಿದೆ ಅಲ್ಲವೆ? ಅವನು ಹೇಳುತ್ತಾನೆ, ಮುಸಲ್ಮಾನರ ಮಹಿಳೆಯರನ್ನು ಕೀಳಾಗಿ ಕಾಣುತ್ತಾರೆಂದು ಆಪಾದಿಸುತ್ತಾರೆ. ಇಸ್ಲಾಂ ಧರ್ಮ ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ಕೊಟ್ಟಿದೆ.

ಮನುಷ್ಯ ತನ್ನ ಕಾಮಕ್ಕಾಗಿ ಮಹಿಳೆಯನ್ನು ಕೀಳಾಗಿ ನಡೆಸಿಕೊಳ್ಳುತ್ತಾನೆ. ಆಕೆಯ ಆತ್ಮವನ್ನು ಗೌರವಿಸುವ ಬದಲು ಆಕೆಯ ದೇಹವನ್ನು ಗೌರವಿಸುತ್ತಾನೆ, ಮತ್ತು ಆತ ತನ್ನ ಈ ಕೃತ್ಯದಲ್ಲಿ ಎಷ್ಟು ಯಶಸ್ವಿಯಾಗಿದ್ದಾನೆಂದರೆ ಇಂದು ಮಹಿಳೆಗೆ ತಾನು ತನ್ನ ದೇಹವನ್ನು ಸಿಂಗರಿಸಿಕೊಳ್ಳುವುದು ತನ್ನ ಗುಲಾಮತನದ ಲಕ್ಷಣ ಎಂಬುದು ಆಕೆಗೆ ತಿಳಿಯದೇ ಹೋಗುವಷ್ಟು, ಇದು ಸತ್ಯವಲ್ಲದಿದ್ದರೆ ಹೇಗೆ ಪ್ರೇಮದಲ್ಲಿರುವ ಸಹೋದರಿಯರು ತಮ್ಮ ದೇಹವನ್ನು ಸಿಂಗರಿಸಿಕೊಳ್ಳುವುದರಿಂದ ಅಷ್ಟೊಂದು ಖುಷಿಪಡುತ್ತಿದ್ದರು ? ನಾವು ಪುರುಷರು ಅವಳ ಆತ್ಮವನ್ನು ಹಿಸುಕಿ ಹಾಕಿಲ್ಲವೇ ? ಇಲ್ಲ ಬರೀ ತಾಂತ್ರಿಕ ಸ್ವತಂತ್ರ ಬೇಕಾಗಿಲ್ಲ. ಆಕೆಯ ಆಕಾಂಕ್ಷೆಯ ವಿರುದ್ಧ ಆಕೆಯನ್ನು ಕಟ್ಟಿಹಾಕಿರುವ ಸರಪಳಿಗಳನ್ನು ಕಳಚಬೇಕಾಗುತ್ತದೆ." ಕೊನೆಯಲ್ಲಿ ಆತ ಹೇಳಿದ ತನ್ನ ಹೆಣ್ಣು ಮಕ್ಕಳನ್ನು ಇಂತಹ ಸ್ವತಂತ್ರ ಹೋರಾಟಕ್ಕೆ ಅಣಿಗೊಳಿಸುವ ಬಯಕೆ ತನ್ನದು ಎಂದು

ನಾನು ಈ ಮುಸಲ್ಮಾನ್ ಗೆಳೆಯನ ಮಾತಿನ ಆಳದಲ್ಲಿರುವ ಕಾಳಜಿಯ ಮೇಲೆ ಬೆಳಕು ಚೆಲ್ಲ ಬಯಸುತ್ತೇನೆ. ಮಹಿಳೆ ತಾನೊಂದು ಭೋಗದ ವಸ್ತು ಎಂದು ತಿಳಿಯುವುದನ್ನು ನಿಲ್ಲಿಸಬೇಕು. ಇದಕ್ಕೆ ಪರಿಹಾರ ಆಕೆಯ ಕೈಯಲ್ಲೇ ಇದೆ. ಆಕೆ ಪುರುಷರಿಗಾಗಿ ತನ್ನನ್ನು ಸಿಂಗರಿಸಿಕೊಳ್ಳುವುದನ್ನು ತಿರಸ್ಕರಿಸಬೇಕು. ಆಕೆಯ ಪತಿಗಾಗಿಯೂ ಸಹ!-ಆಕೆ ನಿಜವಾದ ಸಂಗಾತಿಯಾಗಿದ್ದಾರೆ. ನಾನು ಸೀತೆ ತನ್ನ ದೇಹ ಸೌಂದರ್ಯದಿಂದ ರಾಮನನ್ನು ಸಂತಷಗೊಳಿಸಲು ಉಪಯೋಗಿಸುವ ಒಂದು ನಿಮಿಷವನ್ನು ಊಹಿಸಿಕೊಳ್ಳಲಾರೆ.

'ಸಂಗ್ರಹ'

ಶೈಲಜ ಕೆ. ಪಿ.

---

# ಸ್ತ್ರೀ ಮತ್ತು ಮಾನವೀಯತೆ

"ಹೆಂಗಸರನ್ನು ಜೀವಸಹಿತ ಸುಡುವುದು ಸರಿ ಎನ್ನುವುದರ ಮೂಲಕ ಜನ ತಮಗೆ ಹೆಚ್ಚು ಮತ ಹಾಕುತ್ತಾರೆನ್ನುವುದಾದರೆ ನಮ್ಮ ರಾಜಕೀಯ ಪಕ್ಷಗಳು ಹೆಂಗಸರನ್ನು ಸುಡುವುದರಲ್ಲೇ ಪೈಪೋಟಿ ನಡೆಸಿಯಾವು!" ಎಂಬ ಟೀಕೆಯನ್ನು ರಿ॥ ಜಸ್ಟಿಸ್ ಕೃಷ್ಣ ಅಯ್ಯರ್ ಮಾಡಿರುವುದು ಅತ್ಯಂತ ವಾಸ್ತವಿಕವೂ ಹಾಗೂ ಗಂಭೀರವೂ ಆಗಿದೆ. ಅರ್ಥಾತ್ ಇಂದು ರಾಜಕಾರಣವು ಯಾವ ದಾರಿಯನ್ನು ಹಿಡಿಯುತ್ತಿದೆ ಮತ್ತು ಮಾನವೀಯ ಮೌಲ್ಯಗಳು ಹೇಗೆ ಕಣ್ಮರೆಯಾಗುತ್ತಿವೆ ಎಂಬುದಕ್ಕೆ ಒಂದು ನಿದರ್ಶನ. ಇತ್ತೀಚೆಗೆ ರಾಜಸ್ಥಾನದಲ್ಲಿ ನಡೆದ ರೂಪಕನ್ವರ್‌ಳ ಬಲತ್ಕಾರದ 'ಸತಿ' ಮತ್ತು ಅದರ ಬಗ್ಗೆ ರಾಜಕಾರಣಿಗಳ ನಿರುತ್ಸಾಹದಾಯಕ ಪ್ರತಿಕ್ರಿಯೆ. ಮೇಲಾಗಿ ಕೆಲವು ಪಂಗಡದ ರಾಜಕೀಯ ಮುಖಂಡರು ಈ ಬಲತ್ಕಾರದ ಸತಿಯನ್ನು ಬೆಂಬಲಿಸಿರುವುದು ಹಾಗೂ 'ಪ್ರಗತಿಪರ'ವೆಂದು ಹೇಳಿಕೊಳ್ಳುವ ಕೆಲವು ರಾಜಕೀಯ ಪಕ್ಷಗಳು ಈ ಬಗ್ಗೆ ಮೌನವಾಗಿರುವುದು ಅತ್ಯಂತ ಸೋಜಿಗವೇ ಸರಿ!

ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನ ಹಕ್ಕು ಬಾಧ್ಯತೆಗಳೆಂದು ಮುಂತಾಗಿ ದೊಡ್ಡ ಮಾತನಾಡುವ ವಿದ್ಯಾವಂತ ಜನರೇ 'ವರದಕ್ಷಿಣೆ' ತರಲಿಲ್ಲವೆಂಬ ಕಾರಣದಿಂದ ನಮ್ಮ ವಿವಾಹಿತ ತರುಣಿಯರನ್ನು ಮಾನಸಿಕವಾಗಿ ಹಿಂಸಿಸುತ್ತಾ ಅಮಾನವೀಯವಾಗಿ ಅವರ ಮರಣಕ್ಕೆ ಕಾರಣರಾಗುತ್ತಿರುವುದು ಎಂತಹ ಶೋಚನೀಯ ಸ್ಥಿತಿ! ಅಂತಹ ದೌರ್ಭಾಗ್ಯ ತರುಣಿಯರ ಆತ್ಮಹತ್ಯೆ ಹಾಗೂ ಪ್ರತ್ಯಕ್ಷ ಕೊಲೆಗಳು ಇಂದು ಸರ್ವಸಾಮಾನ್ಯವಾಗಿದೆ. ಸ್ತ್ರೀಯನ್ನು ಕೇವಲ ಭೋಗ ವಸ್ತುವೆಂದು ಪರಿಗಣಿಸುತ್ತಾ, ಸಿನೆಮಾಗಳಲ್ಲಿ ಜಾಹಿರಾತುಗಳಲ್ಲಿ ಅವರ ಅರೆನಗ್ನ ಚಿತ್ರಗಳನ್ನು ಪ್ರಕಟಿಸಿ ಹಣಗಳಿಸುವ ಇಂದಿನ ಸಂಪ್ರದಾಯವೂ ಅಮಾನವೀಯವೇ ಮನರಂಜನೆ ಹಾಗೂ ಕೀಳು ಅಭಿರುಚಿಗಳಿಗಾಗಿ ಕ್ಯಾಬರೆ ನೃತ್ಯಗಳಿಂದ ಸ್ತ್ರೀಯನ್ನು ಶೋಷಿಸುತ್ತಿರುವುದು ಬೆತ್ತಲೆ ಸೇವೆಯಷ್ಟೆ ಅಮಾನುಷೀಯವಲ್ಲವೇ?

ಹೀಗೆ ಎಲ್ಲೆಲ್ಲೂ ಸ್ತ್ರೀಯ ಬಗ್ಗೆ ಅಮಾನವೀಯ ತಾಂಡವಾಗುತ್ತಿದ್ದಾಗ, ಸ್ತ್ರೀ ಸ್ವಾತಂತ್ರ್ಯ ಸಮಾನತೆ ಮುಂತಾದವುಗಳು ಕೇವಲ ಕಾಗದದಲ್ಲಿ ಮಾತ್ರ ಹೆಚ್ಚೆಂದರೆ ಚುನಾವಣೆಗಳಲ್ಲಿ ಸ್ಥಾನ ಮೀಸಲಿರಿಸಿ ರಾಜಕೀಯ ಅಧಿಕಾರಗಳಿಸುವಲ್ಲಿಗೆ ಸೀಮಿತವಾಗಿದೆ. ವಿಧವಾವಿವಾಹ, ಸ್ತ್ರೀಯು ವಿವಾಹ ವಿಚ್ಛೇದನ ಪಡೆದು ಬೇರೊಂದು ವಿವಾಹ ಮಾಡಿಕೊಳ್ಳುವುದಕ್ಕೆ ಅವಕಾಶ ಮತ್ತು ಬಹುಪತ್ನಿತ್ವಕ್ಕೆ ತಡೆ ಇವೆಲ್ಲವೂ ಕಾನೂನಿನಲ್ಲಿದ್ದರೂ ಸಾಮಾಜಿಕ ಆಚರಣೆಯಲ್ಲಿ ಅವುಗಳನ್ನು ತರುವ ಪರಿಸ್ಥಿತಿ ಇಂದು ಎಲ್ಲೂ ಕಾಣುತ್ತಿಲ್ಲ. ಭಾರತವನ್ನು ನಾವು 'ಧರ್ಮನಿರಪೇಕ್ಷ ರಾಷ್ಟ್ರ'ವೆಂದು ಘೋಷಿಸಿದ್ದರೂ ಸಕಲ ಧರ್ಮಿಯರಿಗೂ ಅನ್ವಯವಾಗುವ ವಿವಾಹ, ಸ್ತ್ರೀಯ ಹಕ್ಕು-ಬಾಧ್ಯತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ನಾಗರಿಕ ಕಾನೂನು (Common Civil code) ರೂಪಿಸಲು ಸಾಧ್ಯವಾಗದಿರುವುದು ಅದೆಷ್ಟು ನಾಡಿಕೇಡು? ಕೇವಲ ಚುನಾವಣೆಗಳಲ್ಲಿ ಮತಗಳಿಸುವುದಕ್ಕಾಗಿ ಅಲ್ಪಸಂಖ್ಯಾತ ಜನಸಮುದಾಯದಲ್ಲಿನ ಮೂಢನಂಬಿಕೆಗಳನ್ನೂ ಅಮಾನವೀಯ ಸಂಪ್ರದಾಯಗಳನ್ನು ಕಂಡು ಕಾಣದಂತೆ ವರ್ತಿಸುವ ಮತ್ತು ಕೆಲವು ಸಾರಿ ಅವುಗಳ ರಕ್ಷಣೆಗಾಗಿಯೇ ಧಾವಿಸುವ ನಮ್ಮ ಕೆಲವು ರಾಜಕಾರಣಿಗಳೂ ಮತ್ತು ಕೆಲವು ಪತ್ರಿಕೆಗಳೂ ಸಹ ಅಪರಾಧಿಗಳೆಂದರೆ ತಪ್ಪಾಗಲಾರದು.

● ಕೆಎಸ್ಕೆ.

# ಓದುಗರ ವಿಭಾಗ

'ದುರುಪಯೋಗವಾಗುತ್ತಿರುವ ವೈದ್ಯಕೀಯ ತಾಂತ್ರಿಕತೆಗಳು' ಉತ್ತಮ ಲೇಖನ. ಇದೇ ರೀತಿಯ ಉಪಯುಕ್ತ ಲೇಖನಗಳನ್ನು ಪ್ರಕಟಿಸುತ್ತಿರಿ.

● ಉಮಾ, ಶಿವಮೊಗ್ಗ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ಹಿಂಸೆಯನ್ನು ಬೆಳಕಿಗೆ ತರುವ. ಶೋಷಿತ ವ್ಯವಸ್ಥೆಯನ್ನು ವಿರೋಧಿಸುವ, ಮಹಿಳಾ ಆಂದೋಳನದ ತಾತ್ವಿಕ ನೆಲೆಯನ್ನು ಅನ್ವೇಷಿಸುವ, ಮಹಿಳೆಯರ ಅಭಿವ್ಯಕ್ತಿಗಳನ್ನು ಎತ್ತಿ ಹಿಡಿಯುವ ಉದ್ದೇಶದಿಂದ 'ಮಾನವಿ' ಪತ್ರಿಕೆಯನ್ನು ಪ್ರಕಟಿಸುತ್ತಿದ್ದೀರಿ. ಈ ಪತ್ರಿಕೆ ಖಂಡಿತಾ ಯಶಸ್ವಿಯಾಗುತ್ತಿದೆ.

● ಬುಚ್ಚಿಬಾಬು, ಕೋಡಿಗೇನಹಳ್ಳಿ

'ಮಾನವಿ' ಯಲ್ಲಿನ ಸಂಪಾದಕೀಯ/ಲೇಖನಗಳು/ಕವನಗಳು ನನಗೆ ಖುಷಿ ಕೊಡುತ್ತಿವೆ. ತಮ್ಮ ಈ ಮಹತ್ವದ ಕಾರ್ಯದಲ್ಲಿ ಹೆಚ್ಚು ಹೆಚ್ಚು ಯಶಸ್ಸು ಸಿಗುತ್ತಾ ಹೋಗಲೆಂದು ಹಾರೈಸುತ್ತೇನೆ.

● ಭಾಗೀರಥಿ ಹೆಗಡೆ
ಸಿರಸಿ

ಜುಲೈ-ಆಗಸ್ಟ್ 1986ರ ಮಾನವಿ ಸಂಚಿಕೆಯಲ್ಲಿ ಮೂಡಿಬಂದ ಹೆಣ್ಣಿನ ಆಕರ್ಷಕ ಮುಖಪುಟ ಸುಂದರವಾಗಿತ್ತು.

● ಶ್ರೀ ತಾಳಿಕೋಡಿ ಸುಂಗೂರೇಶ್ವರ
ಅರಕೇರ

ಸಂಚಿಕೆ ಮೂರು ಮತ್ತು ನಾಲ್ಕರ ಸಂಪಾದಕೀಯ ಮೆಚ್ಚಿಕೆಯಾದವು. ಸಂಚಿಕೆ 4ರ 'ಸುಂದರ ಸ್ವಪ್ನಗಳು' ಚಿತ್ರ ವಿಮರ್ಶೆ ಪ್ರಭುದ್ಧವಾಗಿತ್ತು, ಕಥೆಗಳು, ಸಂವೇದನೆ ಶೀರ್ಷಿಕೆಯಲ್ಲಿನ ಬರಹಗಳು ಅವುಗಳ 'ಮೂಡ್'ಗೆ ಸರಿಹೊಂದದ ಮತ್ತು ಒಂದೇ ರೀತಿಯ ಏಕತನದ ಶೈಲಿಗೆ ಶರಣಾಗಿರುತ್ತವೆ. ಅವು ಸರಳ, ಸಂಕ್ಷಿಪ್ತ, ನೇರವಾಗಿದ್ದರೆ ಹೆಚ್ಚು ಪರಿಣಾಮಕಾರಿಯಾಗುವುದು ಸಾಧ್ಯ. ಬಹುತೇಕ ಕವನಗಳು ತೀರಾ ವಾಚ್ಯವಾಗಿವೆ.

● ಪ್ರಭಾಕರ್ ಎಸ್ಕೆ.
ಚಿಕ್ಕಮಗಳೂರು

ಸ್ತ್ರೀ ಶೋಷಣೆಯ ಬಗ್ಗೆ ಮತ್ತು ಅದು ಪರಿಹಾರವಾಗುವ ಬಗೆಗಿನ ಪ್ರಶ್ನೋತ್ತರ ಮಾಲಿಕೆಯ ಅಂಕಣವೊಂದನ್ನು ನೀವು 'ಮಾನವಿ'ಯಲ್ಲಿ ಪ್ರಕಟಿಸಬಾರದೇಕೆ? ಅದರಿಂದ ಎಷ್ಟೋ ಜನ ಸ್ತ್ರೀಯರ ಸಮಸ್ಯೆಗಳ ಪರಿಹಾರವಾದರೂ ಆಗಬಹುದಲ್ಲವೇ? 'ಮಾನವಿ' ಪತ್ರಿಕೆ ಓದಿದ ನನ್ನ ಗೆಳತಿಯು ರೂಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

● ಶುಭಾ ವಿ. ಆರ್.
ಮಲ್ಲಾಡಿಹಳ್ಳಿ

ನವಂಬರ್ 6-1983ರ ವೀಕ್ಲಿಯಲ್ಲಿ ಗೀತಾಂಜಲಿ ಒಂದಷ್ಟು ಪದ್ಯಗಳಿದ್ದವು. ಅನಂತರ ಲಂಕೇಶ್ ಪೇಪರಿನ ದೀಪಾವಳಿ ವಿಶೇಷಾಂಕದಲ್ಲಿ, ಇತ್ತೀಚೆಗೆ 'ಸಂವಾದ'-2 ದಲ್ಲಿ ಪುನಃ ಅವಳ ಪದ್ಯಗನ್ನು ಓದಿದೆ. ನಂತರ ಈಗ ಮಾನವಿಯಲ್ಲಿ. ಅವೆರಡೂ ಪತ್ರಿಕೆಯಲ್ಲಿ ಅನುವಾದಿಸಿದ್ದು ಶಾಂತಾ ಬಿ. ಎನ್. ಶಾಂತಾರವರ ಅನುವಾದವೇ ಹೆಚ್ಚು ಖುಷಿಯಾಗುತ್ತದೆ, ಸ್ವಂತ ಕನ್ನಡದ್ದೇ ಎನಿಸುತ್ತದೆ. ಪಾರ್ವತಿಯವರು ಅನುವಾದಿಸಿದ ನೋವಿನ ಆಳವಾದ ಆಸೆಗಳು, ಜೀವನ, ಹಕ್ಕಿಯೊಂದು ...ವಿದಾಯಗಳನ್ನು ಶಾಂತ ಅನುವಾದಿಸಿದ್ದು, ಅವುಉತ್ತಮ ಅನುವಾದಗಳಾಗಿವೆ.

● ನಾರಾಯಣ ಮೂರ್ತಿ ಮರಕಿಣಿ
ಅಡ್ಯನಡ್ಕ-ದ.ಕನ್ನಡ

ಅಮೃತಾ ಪ್ರೀತಮ್‌ರ ಫೆಲ್ಲೋ ಕಥೆ ತುಂಬಾ ಹಿಡಿಸಿತು. ಒಟ್ಟಾರೆ 5ನೇ ಸಂಚಿಕೆ ವೈವಿಧ್ಯಮಯಗಳಿಂದ ಕೂಡಿದೆ.

● ಪ್ರೇಮಾ ಸಿರ್ಸಿ, ನೌಬಾದ

'ಮಾನವಿ' ನಿಜಕ್ಕೂ ಪ್ರಭಾವಶಾಲಿಯಾಗಿರುತ್ತಾಳೆ, ಮೂಢನಂಬಿಕೆಗಳನ್ನು ಹೊತ್ತಿರುವ ಮಹಿಳೆಯರು ಇದನ್ನು ಓದಲೇಬೇಕು.

● ಶಾಂಭವಿ, ತಿಪಟೂರು

ಸಂಚಿಕೆ ಮೂರು ಮತ್ತು ನಾಲ್ಕರ ಸಂಪಾದಕೀಯ ಮೆಚ್ಚಿಕೆಯಾದವು. ಸಂಚಿಕೆ 4ರ 'ಸುಂದರ ಸ್ವಪ್ನಗಳು' ಚಿತ್ರ ವಿಮರ್ಶೆ ಪ್ರಭುದ್ಧವಾಗಿತ್ತು. ಕಥೆಗಳು. ಸಂವೇದನೆ ಶೀರ್ಷಿಕೆಯಲ್ಲಿನ ಬರಹಗಳು ಅವುಗಳ 'ಮೂಡ್'ಗೆ ಸರಿ ಯೊಂದದ ಮತ್ತು ಒಂದೇ ರೀತಿಯ ಏಕತಾನದ ಶೈಲಿಗೆ ಶರಣಾಗಿರುತ್ತವೆ. ಅವು ಸರಳ, ಸಂಕ್ಷಿಪ್ತ ನೇರವಾಗಿದ್ದರೆ ಹೆಚ್ಚು ಪರಿಣಾಮಕಾರಿಯಾಗುವುದು ಸಾಧ್ಯ. ಬಹುತೇಕ ಕವನಗಳು ತೀರಾ ವಾಚ್ಯವಾಗಿವೆ.

● ಪ್ರಭಾಕರ ಎಸ್ಕೆ
ಚಿಕ್ಕಮಗಳೂರು

'ಮಾನವಿ'ಯು ತನ್ನ ಅನ್ವರ್ಥನಾಮವನ್ನು ಉಳಿಸಿ ಕೊಂಡಿದೆ, ಹೆಚ್ಚು ಹೆಚ್ಚು ಮಹತ್ವಪೂರಿತವಾಗುತ್ತಾ ಸಾಗಿದೆ.

ಭಾಷೆ, ಅತ್ಯಂತ ಪ್ರೌಢವೂ, ಗಂಭೀರವೂ ಆಗಿದ್ದು ಸಾಹಿತ್ಯಕವಾಗಿ ಸಂಪದ್ಭರಿತವಾಗಿದೆ, 'ಮಾನವಿ'ಯ ಸಂದೇಶವು ಹೃದಯ ಮತ್ತು ಮನ್ಸುಗಳೆರಡನ್ನೂ ತಲುಪು ವಷ್ಟು ಪರಿಣಾಮಕಾರಿಯಾಗಿದೆ. ಕವನಗಳು ಹೆಣ್ಣಿನ ಮನ ದಾಳ ತುಡಿತದ ಸಂಕೇತವಾಗಿದೆ, ಮಾತ್ರವಲ್ಲದೆ ಸೋಗ ಲಾಡಿತನದಿಂದ ದೂರವಾಗಿದೆ. ಸಿನಿಮಾ ವಿಮರ್ಶೆಯ ತುಂಬಾ ಮೌಲಿಕವಾಗಿದ್ದು, ಸಮಾಜದ ಪುನರ್ರಚನೆಯಲ್ಲಿ ಹೆಣ್ಣಿಗೆ ಗೌರವ ಸ್ಥಾನವನ್ನೂ ಕೊಡುವತ್ತ ನಿರ್ದೇಶಕ ರನ್ನು ಎಚ್ಚರಿಸುವಂತಿದೆ. ಪ್ರತಿಕಾ ಜಾಹಿರಾತುಗಳ ಬಗ್ಗೆ ಪ್ರಕಟವಾದ ಸಂಪಾದಕೀಯ ಮೆಚ್ಚುವಂತಾಗಿದ್ದು. ಪ್ರಗ ತಿಯ ಮಾತನಾಡುವ ಇಂದಿನ ಪತ್ರಿಕೆಗಳು, ಸಿನೆಮಾ ಇತ್ಯಾದಿ ಮಾಧ್ಯಮಗಳು ಹಾಗೂ ಸಾಮಾಜಿಕ ರಾಜಕೀಯ ಮುಂದಾಳುಗಳು ಹೆಣ್ಣನ್ನೂ ಶೋಷಿಸುತ್ತಿರುವ ಬಗ್ಗೆಯೂ 'ಮಾನವಿ' ತನ್ನ ಧ್ವನಿ ಎತ್ತುವಳೆಂದು ಆಶಿಸಲಾಗಿದೆ.

● ಕೆವಿಸ್ಕೆ, ಭದ್ರಾವತಿ

'ಮಾನವಿ' ಪತ್ರಿಕೆಯನ್ನು ಓದಿದ ನಾನು ಸಂಪಾ ದಕೀಯ ಮಂಡಳಿಯ ಪ್ರಯತ್ನಕ್ಕೆ ತಲೆದೂಗಿದೆ. ಪತ್ರಿಕೆ ವಸ್ತು ನಿಷ್ಠವಾಗಿದ್ದು ಮಹಿಳೆಯರ ಸಮಸ್ಯೆಗೆ ಒತ್ತು ಕೊಟ್ಟು ಅವರ ಸಮಸ್ಯೆಗೆ ಸಮರ್ಪಕ ಮಾಧ್ಯಮವಾಗಿದೆ. ಪತ್ರಿಕೆ ಪ್ರಗತಿ ಪಥದತ್ತ ಸಾಗಿ ಸ್ತ್ರೀ ಸಮುದಾಯದಲ್ಲಿ ನವಜಾಗೃತಿ ಮೂಡಿಸುವಂತಾಗಲೆಂದು ಹಾರೈಸುತ್ತೇನೆ.

● ಕೆ. ಪತ್ರೆಬಸಪ್ಪ
ಮೈಲಾರ

---

## ಸಿನಿಮಾ

## ರೆಟ್ಟೆವಾಲ್ ಕುರುವಿ
### (ಎರಡು ರೆಕ್ಕೆಗಳ ಪಕ್ಷಿ)

ತಮಿಳು ಚಲನ ಚಿತ್ರೋದ್ಯಮದ ವ್ಯಾಪಾರೀ ಚಿತ್ರ ಗಳಲ್ಲಿ ಅಚ್ಚುಕಟ್ಟು ನಿರ್ದೇಶಕ ಎಂದು ಹೆಸರಾದ ಬಾಲು ಮಹೇಂದ್ರರ 'ರೆಟ್ಟೆವಾಲ್ ಕುರುವಿ' ಇತ್ತೀಚೆಗೆ ಬಿಡುಗಡೆ ಯಾದ ಸಿನಿಮಾ. ಮದ್ರಾಸಿನ ಮಹಿಳಾ ಗುಂಪುಗಳು ಈ ಚಿತ್ರದ ಪ್ರದರ್ಶನವನ್ನು ರದ್ದು ಪಡಿಸಲು ಕೋರಿ ಗಲಾಟೆ ಮಾಡಿದವು. ವ್ಯಾಪಾರಿ ಹಾಗೂ ಕಲಾತ್ಮಕ ಅಂಶಗಳನ್ನೊಳ ಗೊಂಡ ಈ ಸಿನೆಮಾ ಮಹಿಳೆಯರ ವ್ಯಕ್ತಿತ್ವಕ್ಕೆ ಧಕ್ಕೆಯ ನ್ನುಂಟುಮಾಡಿದೆ ಎಂಬುದು ಮಹಿಳಾ ಗುಂಪುಗಳ ಅಭಿ ಪ್ರಾಯ. ಈ ಚಿತ್ರದ ನಾಯಕ ಮದುವೆಯಾಗಿ ಟಿ.ವಿ. ಯಲ್ಲಿ ಕೆಲಸ ಮಾಡುತ್ತಿದ್ದು ಮಕ್ಕಳನ್ನು ಇಷ್ಟಪಡುವವ. ಕೆಲಸದ ಒತ್ತಡದಲ್ಲಿ ಇವನ ಹೆಂಡತಿ ಮಗು ಪಡೆಯುವು ವುದನ್ನು ಮುಂದೂಡುತ್ತಾ ಹೋಗಬೇಕಾಗುತ್ತದೆ. ಆಕೆಗೆ ಪ್ರಮೋಶನ್ ಸಿಕ್ಕಿ ವರ್ಗವಾದಾಗ ಈತ ಒಬ್ಬ ಆಧುನಿಕ ಎನ್ನಬಹುದಾದ ಹಾಡುಗಾರ್ತಿಯ ಪ್ರೀತಿಗೆ ಒಳಗಾಗು ತ್ತಾನೆ. ಮದುವೆಯಾಗಿದೆಯೆಂದು ಹೇಳಬೇಕೆಂದರೂ ಸಾಧ್ಯವಾಗುತ್ತಿಲ್ಲ ಎಂಬ ದ್ವಂದ್ವ ಅನುಭವಿಸುತ್ತಿಲೇ ಈಕೆಯ ಜೊತೆ ಹಾಗೂ ಹೆಂಡತಿಯ ಜೊತೆ ದ್ವಂದ ಅನುಭವಿಸುತ್ತಲೇ ಈಕೆಯ ಜೊತೆ ಹಾಗೂ ಹೆಂಡ ತಿಯ ಜೊತೆ ಒಬ್ಬರಿಗೆ ಹಾಗೂ ಇನ್ನೊಬ್ಬರಿಗೆ ಗೊತ್ತಿಲ್ಲ ದಂತೆ ಚಾಣಕ್ಯತನದಿಂದ ಜೀವನ ನಡೆಸುತ್ತಾನೆ. ಪ್ರೀತಿಸಿದ ಹುಡುಗಿ ಗರ್ಭಿಣಿಯಾದಾಗ ಹೆಂಡತಿಗೆ ಗೊತ್ತಿಲ್ಲದಂತೆ ಮಗುವಿಗಾಗಿ ಎಂಬ ನೆಪ ಒಡ್ಡಿ ಮದುವೆಯಾಗುತ್ತಾನೆ. ನಿತ್ಯ ಜೀವನದ ಘಟನೆಗಳಲ್ಲಿ ಇಬ್ಬರು ಹೆಂಡತಿಯರಿಗೂ ಸುಳ್ಳು ಹೇಳುತ್ತಾ ಅನುಮಾನ ಬಾರದ ಹಾಗೆ ಚಾಲೂಕು ತನದಿಂದ ವರ್ತಿಸುತ್ತಾನೆ ಎಂಬುದು ಪ್ರಶಂಶನೀಯ ಧ್ವನಿ ಯಲ್ಲಿ, ಹಾಸ್ಯದಲ್ಲಿ ವ್ಯಕ್ತಗೊಂಡಿದೆ. ಇಬ್ಬರು ಹೆಂಡತಿ ಯರು ಗರ್ಭಿಣಿಯರಾಗಿ ಆಸ್ಪತ್ರೆ ಸೇರಿದಾಗ ಸತ್ಯ ಬಯ ಲಾಗುತ್ತವೆ. ಇಬ್ಬರೂ ತಮ್ಮ ಮುಖ ಹಾಗೂ ಮಕ್ಕಳ ಮುಖ ನೋಡಬೇಡ ಎನ್ನುತ್ತಾರೆ. ನಾಯಕ ಕೆಲಸ ಕಳೆದು ಕೊಳ್ಳುತ್ತಾನೆ. ಕೊನೆಗೆ ಮಕ್ಕಳಿಗಾಗಿ ಎಂಬಂತೆ ಇಬ್ಬರೂ ಅವನನ್ನು ಒಪ್ಪಿಕೊಳ್ಳುತ್ತಾರೆ.

ಇಬ್ಬರು ಹೆಂಡತಿಯರಿಗೂ ಮೋಸ ಮಾಡುವ ಚಾಕ ಚಕ್ಯತೆಯನ್ನು, ನಯ ವಂಚನೆಗಳನ್ನು, ಚಾಲೂಕು ತನವನ್ನು ಹಾಗೂ ಹೆಂಗಸರು ಪೆದ್ದರು ಎಂಬುದನ್ನು ಎತ್ತಿ ಹಿಡಿಯುತ್ತದೆ ಈ ಧೋರಣೆಗಳನ್ನು ವಿರೋಧಿ ಸಿಯೇ ಮದರಾಸಿನ ಮಹಿಳಾ ಗುಂಪುಗಳು ಈ ಸಿನಿಮಾದ ಪ್ರದರ್ಶನ ರದ್ದುಪಡಿಸಬೇಕೆಂದು ಆಗ್ರಹ ಪಡಿಸಿದರು.



# ಪುಟಾಣಿ ಪ್ರಪಂಚ

## 'ಪ್ರತಿಮಾಳ ಅದ್ಭುತ ಸಾಹಸ'

---

**ಅಜ್ಜಿಯ ಮಗ್ಗುಲಲ್ಲಿ ಕಥೆಗಳನ್ನು ಕೇಳುತ್ತಾ ಕಲ್ಪನೆಯ ಎಳೆಗಳ ಚಿತ್ತಾರಗಳಲ್ಲಿ ಮನಸ್ಸುಗಳು ಅರಳುವ ಪ್ರಕ್ರಿಯೆ ಸೋಜಿಗದ್ದು. ಈ ಕಥೆಗಳನ್ನು ಕೇಳುತ್ತಾ ಬೆಳೆಯುವ ಬಾಲಕ ಸಾಹಸ ಧೈರ್ಯ, ಬದುಕನ್ನೆದುರಿಸುವ ಆತ್ಮ ವಿಶ್ವಾಸ, ಸೃಜನಾತ್ಮಕತೆಗೆ ಸಾಗುವಂತಹ ಮನಸ್ಥಿತಿ ಹೊಂದುತ್ತಾನೆ. ಆದರೆ ಏಳು ಮಲ್ಲಿಗೆ ತೂಕದ ರಾಜಕುಮಾರಿಯ ಆದರ್ಶದ ಅನುಕರಣೆಗೆ ತೊಡಗುವ ಬಾಲಕಿ ಬಲಿಷ್ಠ ರಾಜಕುಮಾರನ ಬರುವಿಕೆಗಾಗಿ ಕಾಯುತ್ತಾ ಕನಸಿನ ಪ್ರಪಂಚದಲ್ಲಿ ಮುಳುಗುವಂತಹ ನಿಷ್ಕ್ರಿಯತೆ ಮೈಗೂಡಿಸಿಕೊಳ್ಳುತ್ತಾಳೆ. ಇಂತಹ ಕಥೆಗಳು, ಸಮಾಜದಲ್ಲಿ ಗಂಡು ಹೆಣ್ಣು ನಿರ್ವಹಿಸಬೇಕಾದ ಸಿದ್ಧ ಪಾತ್ರಗಳನ್ನು ಬಾಲ್ಯದಲ್ಲೇ ಅಚ್ಚೊತ್ತಿ ಬಿಡುತ್ತವೆ. ಸ್ವೀಕೃತ ಮೌಲ್ಯಗಳ ಸಂಕೋಲೆಯಿಲ್ಲದಂತಹ ಮುಕ್ತ ಪರಿಸರದಲ್ಲಿ ವ್ಯಕ್ತಿತ್ವಗಳನ್ನು ಅರಳಿಸುವಂತಹ ಕಲ್ಪನೆಗಳ ಕಥೆ, ಲೇಖನ, ಚಿತ್ರ, ಕವನಗಳನ್ನು ಪ್ರಕಟಿಸುವ ಪ್ರಯತ್ನದ ಫಲವೇ ಈ ಅಂಕಣ "ಪುಟಾಣಿ ಪ್ರಪಂಚ"**

---

ಹುಡುಗರಿಗೆ ಶಾಲೆಗೆ ಬೇಸಿಗೆ ರಜ ಬಂದು ಎರಡು ದಿನವಾಗಿತ್ತು, ಪ್ರೇಮ, ವಿಜಯ, ಕುಮಾರ, ಶೈಲ, ವೀಣಾ ಎಲ್ಲರಿಗೂ ಬೇಸರ. ಥೂ ಸ್ಕೂಲಿಗೆ ಯಾಕಾದರೂ ರಜೆ ಬರುತ್ತೊ. ಬೇಜಾರು ಎಂದು ವಿಜಯ ಗೊಣಗುಟ್ಟಿದಳು. ಹೌದು ಕಣೆ ನಮಗೂ ಬೇಸರ. ಯಾವಾಗ ಶಾಲೆ ಬಾಗಿಲು ತೆಗೆಯುತ್ತೋ ಅನ್ನಿಸಿದೆ. ಎಂದು ವೀಣಾ ಧ್ವನಿ ಸೇರಿಸಿದಳು. ಆಗ ಪ್ರೇಮ ಹೋಗಲಿ ಎಲ್ಲರೂ ನಮ್ಮನೆಗೆ ಬನ್ರೇ. ನಮ್ಮಜ್ಜಿ ಒಳ್ಳೆ ಕಥೆಗಳನ್ನ ಹೇಳ್ತಾರೆ ಎಂದು ಎಲ್ಲರನ್ನೂ ತನ್ನ ಮನೆಗೆ ಕರೆದುಕೊಂಡು ಹೋದಳು.

ಪ್ರೇಮಳ ಅಜ್ಜಿ ಹುಡುಗರಿಗಾಗಿ ಪೂರಿ, ಒಡೆ ಮಾಡಲು ತಯಾರಿ ನಡೆಸುತ್ತಿದ್ದರು. ಇವರುಗಳನ್ನು ಕಂಡು ಏನ್ರೋ ಎಲ್ಲ ಈ ಕಡೆ ಬಂದಿರಿ. ಎಲ್ಲ ಪರೀಕ್ಷೆಲಿ ಪಾಸ್ ಆಗ್ತೀರಿ ತಾನೆ ಎಂದು ಹಾಸ್ಯ ಮಾಡಿದಳು. ಆಗ ಎಲ್ಲರೂ ಅಜ್ಜಿ, ಪರೀಕ್ಷೆ ಏನೋ ಚೆನ್ನಾಗಿ ಮಾಡಿದ್ದೀವಿ, ಪಾಸ್ ಆಗಬೇಕಾದರೆ ನಿಮ್ಮ ಆಶೀರ್ವಾದ ಬೇಕು ಎಂದು ಅಜ್ಜಿಯನ್ನು ಪೂಸಿ ಹೊಡೆದರು. ಅಜ್ಜಿ ಬಹಳ ಖುಷಿಯಾಗಿ ಪಾಸಾಗುತ್ತೀರ ಬಿಡ್ರೋ ನೀವೆಲ್ಲ ಜಾಣ ಮಕ್ಕಳು ಎಂದು ಒಳಗೆ ಹೋಗಲು ನೋಡಿದಾಗ ಎಲ್ಲರೂ ಸುತ್ತಿಕೊಂಡರು. ಅಜ್ಜಿ ನೀವು ಚೆನ್ನಾಗಿ ಕಥೆ ಹೇಳುತ್ತೀರಿ ಎಂದು ಪ್ರೇಮ ಹೇಳಿದಳು, ಮಕ್ಕಳೆಲ್ಲರೂ ಅದಕ್ಕಾಗೇ ಬಂದಿದ್ದೀವಿ ಒಂದು ಕಥೆ ಹೇಳಜ್ಜಿ ಎಂದು ಗಲಾಟೆ ಮಾಡಲು ಶುರು ಮಾಡಿದರು. ಸರಿ ಹಲಸಿನ ಮರದ ಕೆಳಗೆ ಕೂರೋಣ ನಡೆಯಿರಿ ಎಂದು ಅಜ್ಜಿ ಎಲ್ಲರನ್ನೂ ಕರೆದುಕೊಂಡು ಮರದ ಕೆಳಗೆ ಕುಳಿತು ಲೇ ಪ್ರೇಮಿ, ನಿಮ್ಮಮ್ಮನಿಗೆ ಹೇಳು, ಅಜ್ಜಿ ಬರೋಲ್ಲ, ನೀನೇ ಉಂಡೆ ಮಾಡಿಬಿಡು ಎಂದು ಹೀಗೆ ಪ್ರೇಮಾಳಿಂದ ಹೇಳಿಕಳುಹಿಸಿ, "ಹೂಂ ಈಗ ಯಾವ ಕಥೆ ಬೇಕು, ರಾಜನ ಕಥೇನ, ದೆವ್ವದ ಕಥೇನ, ರಾಕ್ಷಸಿ ಕಥೇನ.

ಅಷ್ಟರಲ್ಲಿ ಅಲ್ಲಿಗೆ ಬಂದ ಪ್ರೇಮ ಅದು ಯಾವುದೂ ಬೇಡ 'ಅಜ್ಜಿ ದುಷ್ಟರಾಜನ ಕಥೆ ಹೇಳುತ್ತಿದ್ದೆಯಲ್ಲ ಅದೇ ಹೇಳು' ಎಂದಳು. 'ಸರಿ ಎಲ್ಲರೂಬಂದಿದ್ದೀರ'

ಎಂದು ಸುತ್ತಲೂ ನೋಡಿದರು. "ಎಲ್ಲರೂ ಇದ್ದೀವಿ" ಅಂದಾಗ ಅಜ್ಜಿ ಕಥೆಯನ್ನು ಶುರು ಮಾಡಿದರು.

"ಒಂದು ಊರಿನಲ್ಲಿ ಒಬ್ಬ ರಾಜನಿದ್ದ. ಅವನಿಗೆ ಮುವ್ವತ್ತು ವರ್ಷ ವಯಸ್ಸಾಗಿತ್ತು. ಅವನು ನೋಡೋಕೆ ತುಂಬಾ ಸುಂದರನೂ, ಬುದ್ಧಿವಂತನೂ, ಧೈರ್ಯಶಾಲಿಯೂ ಆಗಿದ್ದ. ಒಬ್ಬನೇ ಕಾಡಿಗೆ ಹೋಗಿ ಹುಲಿ, ಸಿಂಹ ಚಿರತೆಗಳ ಬೇಟೆ ಆಡಿಕೊಂಡು ಬರುತ್ತಿದ್ದ. ಆದರೆ ಅವನಿಗೆ ಒಂದೇ ಒಂದು ಕೆಟ್ಟ ಗುಣ ಇತ್ತು. ಅದು ಏನಪ್ಪಾ ಅಂದರೆ, ಆವೂರಿನಲ್ಲಿ ಯಾವುದೇ ಹುಡುಗಿ ಮದ್ವೆ ಆಗ್ಬೇಕು ಅಂದ್ರೂ, ಮೊದಲು ಮೊದಲು ಆ ರಾಜನನ್ನೇ ಮದುವೆಯಾಗಿ, ನಾಲ್ಕು ದಿನ ರಾಜನ ಮನೇಲಿದ್ದು ಆಮೇಲೆ ಬೇರೆ ಮದುವೆಯಾಗಬೇಕಿತ್ತು. ಇದು ಅಲ್ಲಿನ ಜನಕ್ಕೆ ಮಾಮೂಲಾಗಿತ್ತು. ಎಲ್ಲರೂ ಅದಕ್ಕೆ ಹೊಂದಿಕೊಂಡಿದ್ದರು. ಏಕೆಂದರೆ, ಹಾಗೆ ಮಾಡದಿದ್ದರೆ, ಮದುಮಗನನ್ನು ರಾಜ ಮದುವೆಯಾದ ದಿನವೇ ಶೂಲಕ್ಕೇರಿಸಿಬಿಡುತ್ತಿದ್ದ.

ಹೀಗೇ ನಡಕೊಂಡು ಬರ್ತಾ ಇತ್ತು ಕಾಲ. ಆ ವೂರಿನಲ್ಲಿ ಒಬ್ಬ ಪಾಳೇಗಾರನಿಗೆ ಪ್ರಗತಿ ಎಂಬ ಒಬ್ಬ ಮಗಳಿದ್ದಳು ಅವಳು ಬಹಳ ಬುದ್ಧಿವಂತೆ. ಹತ್ತು ವರ್ಷದವಳಿರುವಾಗಲೇ, ತನ್ನ ಅಕ್ಕಪಕ್ಕದ ಮನೆಯಲ್ಲಿ ಮದುವೆಯಾದಾಗ, ಅವರು ಅಳುವುದು, ಕೊರಗುವುದು ನೋಡಿ ಇದಕ್ಕೆ ಏನಾದರೂ ಮಾಡಲೇಬೇಕು ಎಂದು ಯೋಚಿಸಿದಳು. ತನ್ನ ತಂದೆಯಿಂದ ಕತ್ತಿವರಸೆ, ಬೇಟೆ, ಬಿಲ್ಲು ಎಲ್ಲ ವಿದ್ಯೆಯನ್ನೂ ಕಲಿತಳು. ದಿನಾ ಕಾಡಿಗೆ ಹೋಗಿ ಬೇಟೆಯಾಡಿ ಬರುತ್ತಿದ್ದಳು. ಆಗ ಊರಿನವರೆಲ್ಲಾ ಬೈದರು --- "ನಿನಗೆ ಬುದ್ಧಿ ಇದೆಯಾ? ಹೆಣ್ಣು ಮಕ್ಕಳು ಹೇಗೆ ಇರಬೇಕೋ ಹಾಗೆ ಇರಬೇಕು. ಹೀಗೆ ಗಂಡುಮಕ್ಕಳ ಹಾಗೆ ವರ್ತಿಸಿದರೆ ನಾಳೆ ಯಾರು ಮದುವೆಯಾಗುತ್ತಾರೆ?" ಎಂದು ಹೀಗೆಳೆದರು. "ಅದಕ್ಕಾಗೇ ನಾನು ಹೀಗೆ ಮಾಡುತ್ತಿರುವುದು" ಎಂದು ಅವಳು ನಗುತ್ತಾ ಉತ್ತರಿಸುತ್ತಿದ್ದಳು ಪ್ರಗತಿ ತಂದೆತಾಯ್ಗಳೂ ಹೇಳಿಹೇಳಿ ಸುಮ್ಮನಾದರು.

ಹೀಗೆ ಒಂದು ದಿನ ಕಾಡಿಗೆ ಹೋದಾಗತುಂಬಾ ಬೇಸರವಾಗಿ ಬಹಳ ದೂರ ಕುದುರೆ ಮೇಲೆ ಕಾಡಿನೊಳಗೆ ಹೋದ ಮೇಲೆ ಮತ್ತೆ ಬರಲು ದಾರಿ ತಪ್ಪಿತು. ಕತ್ತಲಾಗಿ ಹೋಯಿತು. ಏನು ಮಾಡುವುದೆಂದು ಯೋಚಿಸಿದಾಗ ದೂರದಲ್ಲಿ ದೀಪದ ಬೆಳಕು ಕಾಣಿಸಿತು ಅದರ ಜಾಡನ್ನು ಹಿಡಿದು ಹೋದಳು. ಅದು ಋಷಿಯ ಆಶ್ರಮ ಆಗಿತ್ತು. ಅಲ್ಲಿ ಒಬ್ಬ ಮುದಿ ದಂಪತಿಗಳಿದ್ದರು. ಇವಳು ಹೋಗಿ ಅವರಿಗೆ ನಮಸ್ಕರಿಸಿ ನಡೆದ ವಿಷಯ ತಿಳಿಸಿ, ಇಂದು ಇಲ್ಲಿ ಇದ್ದು ನಾಳೆ ಹೋಗುತ್ತೇನೆ ಎಂದಳು. ಅವರು ಸಂತೋಷದಿಂದ ಒಪ್ಪಿ ಅವಳಿಗೆ ಊಟ ಬಡಿಸಿ ಮಲಗಲು ಹೇಳಿ ಆಚೆ ಹೋಗಿ ಕುಳಿತರು. ಹೊರಗೆ ಹೋದ ಅವರು ಬಹಳ ಹೊತ್ತಾದರೂ ಬರದಿರಲು ಅವಳು ಹೊರಗೆ ಬಂದು ನೋಡಿದಳು. ಅವರು ಸುಮ್ಮನೆ ಕುಳಿತಿದ್ದರು. ಆಗ ವಳು "ಅಜ್ಜಿ, ತಾತ ನೀವ್ಯಾವುದೋ ನೋವಿನಲ್ಲಿ ಇರುವ ಹಾಗಿದೆ ನಿಮಗೇನು ಚಿಂತೆ" ಎಂದಳು. ಅವರು "ಅಯ್ಯೊ ಅದೊಂದು ಕರ್ಮ ಕಥೆ" ಎಂದರು. "ನನಗೆ ಹೇಳಿ ಸಾಧ್ಯವಾದರೆ ನಾನು ಸಹಾಯ ಮಾಡುತ್ತೇನೆ" ಎಂದಳು. "ಇಲ್ಲ ಮಗೂ ಅವನು ಬಹಳ ಕ್ರೂರಿ. ನಿನ್ನ ಕೈಯಿಂದ ಸಾಧ್ಯವಿಲ್ಲ ಹೋಗಿ ಮಲಗು" ಎಂದರು. ಪ್ರಗತಿ ಬಿಡದೆ "ಹೇಳಲೇಬೇಕು ಇಲ್ಲವಾದರೆ ನಾನು ನಿಮ್ಮ ಆಶ್ರಮದಿಂದ ಹೋಗುವುದೇ ಇಲ್ಲ" ಎಂದು ಹಟ ಮಾಡಿದಳು. ಆಗ ಅವರು "ಹಾಗಾದರೆ ಕೇಳು. ನಮಗೆ ಒಬ್ಬಳೇ ಮಗಳಿದ್ದಳು ಅವಳು ಬಹಳ ಸುಂದರಿ ಗುಣವಂತೆ ವಿದ್ಯಾವಂತೆ ಬುದ್ದಿವಂತೆ ಅವಳಿಗೆ ಮದುವೆಯ ಸಮಯ ಬಂದಾಗ.... ಈ ಊರಿನ ಕಥೆ ನಿನಗೆ ಗೊತ್ತಿಲ್ಲ. ಮೊದಲು ರಾಜನಿಗೆ ಕೊಟ್ಟು ಮದುವೆ ಮಾಡುವುದು ಎಂದು ನಿರ್ಧರಿಸಿದ್ದೆವು. ಆದರೆ ನನ್ನ ಮಗಳು, ಅಳಿಯನೂ ಒಪ್ಪಲಿಲ್ಲ ಬಂದಿದ್ದನ್ನು ನಾವು ಎದುರಿಸುತ್ತೇವೆ ಎಂದರು. ಸರಿ ನಾವು ಮದುವೆ ಮಾಡಿ ಮುಗಿಸಿದ ಮೇಲೆ ಮದುವೆ ದಿನ ರಾತ್ರಿಯೇ ರಾಜ ಭಟರು ಬಂದು ಮಗಳನ್ನು ಮತ್ತು ಅಳಿಯನನ್ನು ಬಲವಂತದಿಂದ ಎಳೆದೊಯ್ದು ಅಳಿಯನನ್ನು ಶೂಲಕ್ಕೇರಿಸಿ ಮಗಳನ್ನು ಕಾರಾಗೃಹದಲ್ಲಿ ಇಟ್ಟಿರುವನು,

ಅಂದಿನಿಂದ ನಮಗೆ ನಿದ್ದೆಯಿಲ್ಲ ನೆಮ್ಮದಿಯಿಲ್ಲ ಮಗೂ ಅವನನ್ನು ಎದುರಿಸುವ ಶಕ್ತಿ ಯಾರಿಗೂ ಇಲ್ಲ. ಆಗ ನಾವು ಊರು ಬಿಟ್ಟು ಕಾಡು ಸೇರಿ ತಪಶಕ್ತಿಯಿಂದ ಕೆಲವು ಮಂತ್ರ ವಿದ್ಯೆಗಳನ್ನು ಸಾಧಿಸಿದವರು, ಆದರೇನು ಫಲ ? ಅವನ್ನು ಉಪಯೋಗಿಸಿ ಅವನನ್ನು ಸೋಲಿಸಲು ಸರಿಯಾದ ವ್ಯಕ್ತಿ ಇಲ್ಲ ಎಂದು ದುಃಖ ಪಟ್ಟರು. ಆಗ ಪ್ರಗತಿ "ತಾತ ನೀವು ನನ್ನ ಮೇಲೆ ನಂಬಿಕೆಯಿಟ್ಟು ನಿಮ್ಮ ಮಂತ್ರ ಶಕ್ತಿಯನ್ನು ನನಗೆ ಕೊಟ್ಟರೆ ಆ ಚಂಡಾಲನನ್ನು ನಾನು ಸದೆ ಬಡಿಯುತ್ತೇನೆ ಎಂದು ರೋಷದಿಂದ ನುಡಿದಳು ಆ ವೃದ್ಧರು ಸ್ವಲ್ಪ ಹೊತ್ತು ಅವಳ ಮುಖವನ್ನು ಪರೀಕ್ಷಿಸಿ ಆಯಿತು ಮಗಳೇ, ನಿನಗೆ ಆ ದೈರ್ಯವಿದೆ. ನಿನ್ನ ಮೇಲೆ ನಂಬಿಕೆಯಿದೆ ಇಂದೇ ನಿನಗೆ ಆ ವಿದ್ಯೆಯನ್ನೆಲ್ಲಾ ಕಲಿಸುತ್ತೇನೆ. ಎಂದು ಪ್ರಗತಿಗೆ ಸಕಲವನ್ನೂ ನಿಧಾನವಾಗಿ ಭೋದಿಸಿ ಎಲ್ಲ ಮಂತ್ರಶಕ್ತಿಯನ್ನೂ ತೋರಿಸಿಕೊಟ್ಟರು ಮೂರ ನೇ ದಿನವೇ ಋಷಿದಂಪತಿಗಳೊಡನೆ ಊರಿನ ಕಡೆ ಪ್ರಯಾಣ ಬೆಳಸಿ ಮನೆ ಸೇರಿದಳು.

ಮನೆ ಸೇರಿದೊಡನೆ "ನನಗೆ ಬೇಗ ಮದುವೆಯ ಏರ್ಪಾಡು ಮಾಡಿ" ಎಂದು ತನ್ನ ತಂದೆತಾಯ್ಗಳನ್ನು ಒತ್ತಾಯ ಪಡಿಸಿದಳು ಅವರಿಗೆ. ಆಶ್ಚರ್ಯದಜೊತೆಗೆ ಮಗಳಿಗೆಲ್ಲೋ ಬುದ್ಧಿಭ್ರಮಣೆಯಾಗಿದೆ, ಎಂದು, ಭಯವೂ ಆಯಿತು. ಆಗ ವೃದ್ಧ ಋಷಿದಂಪತಿಗಳು, "ನೀವು ಹೆದರದೇ ಒಳ್ಳೆಯ ವರನನ್ನು ಹುಡುಕಿ ಮದುವೆ ಮಾಡಿ ಎಲ್ಲಾ ಒಳ್ಳೆಯದಕ್ಕೆ" ಎಂದು ಧೈರ್ಯ ಹೇಳಿ ದರು. ಸರಿ, ಹುಡುಗಿಯ ತಂದೆತಾಯ್ಗಳು, ವಿಧಿಇಲ್ಲದೇ, ತಮ್ಮ ಸಂಬಂಧಿಕರಲ್ಲೇ ಒಬ್ಬ ಒಳ್ಳೆಯವನನ್ನು ಹುಡುಕಿ ಮದುವೆ ನಿಶ್ಚಯಮಾಡಿದರು. ಆಹ್ವಾನ ಪತ್ರಿಕೆಯನ್ನು ರಾಜನಿಗೂ ಕೊಡುವಂತೆ ಪ್ರಗತಿ ಹಟ ಹಿಡಿದಳು. ಮೊದಲೇ ಹೆದರಿದ್ದ ತಂದೆ ಇದಕ್ಕೆ ಸರ್ವಥಾ ಒಪ್ಪಲಿಲ್ಲ. ಆಗ ಪ್ರಗತಿಯೇ ಹೋಗಿ, 'ಮಹಾರಾಜ, ನನಗೆ ಮದುವೆ ತಾವು ಖಂಡಿತಾ ಬಂದು ನಮಗೆ ಆಶೀರ್ವದಿಸಿ' ಎಂದು ಆಹ್ವಾನಿಸಿದಳು. ರಾಜನಿಗೆ ತುಂಬಾ ಕೋಪ ಬಂದಿತು "ತಾನು ಮದುವೆಯಾಗುವ ಮೊದಲು ನನ್ನನ್ನೇ ಮದುವೆ ಮಾಡಿಕೊಳ್ಳದೇ, ಮತ್ತೆ ಎಷ್ಟು ಧೈರ್ಯವಾಗಿ ನನ್ನನ್ನು ಮದುವೆಗೆ ಆಹ್ವಾನಿಸುತ್ತಿದ್ದಾಳಲ್ಲಾ" ಎಂದು ಮನ ದೊಳಗೇ ಕುದ್ದು, 'ಇದರ ಪರಿಣಾಮ ನಿನಗೆ ತಿಳಿದಿ ದೆಯೇ ?' ಎಂದು ಘರ್ಜಿಸಿದನು. ಆಗ ಪ್ರಗತಿ, ಶಾಂತ ಳಾಗಿ, ಮಹಾರಾಜ, ಮದುವೆಯ ದಿನವಲ್ಲವೇ ನಾನು ಪರಿಣಾಮಗಳನ್ನು ನೋಡುವುದು ಎಂದು ನುಡಿದು ಹೊರ ಟುಹೋದಳು. ಮದುವೆಯ ದಿನಕ್ಕಾಗಿ ಕಾಯುತ್ತಿದ್ದ ಮಹಾರಾಜ, 'ಆ ದಿನ ಸೇವಕರನ್ನು ಕಳುಹಿಸದೆ ತಾನೇ ಹೋಗಿ ಈ ಕೊಬ್ಬಿದ ಹುಡುಗಿಯ ಅಹಂಕಾರವನ್ನು ಅಡಗಿಸಬೇಕು' ಎಂದು ಯೋಚಿಸುತ್ತಿದ್ದನು.

ಮದುವೆಯ ದಿನ ಬಂತು. ಎಲ್ಲಾ ಶಾಂತವಾಗಿ ಜರು ಗಿತು. ಪ್ರಗತಿ ಸಂತೋಷದಿಂದ ಇದ್ದಳು. ಆದರೆ ಅವಳ ತಂದೆ ತಾಯಿ, "ಯಾವ ಘಳಿಗೆ ಏನಾಗುತ್ತದೋ" ಎಂದು ಭಯಭೀತರಾಗಿ ನಡುಗುತ್ತಿದ್ದರು.

ಸರಿ, ರಾತ್ರಿಯಾಯಿತು. ಇನ್ನೇನು ಮಲಗಬೇಕು ಎನ್ನುವಷ್ಟರಲ್ಲಿ ರಾಜ ತನ್ನ ಸೈನಿಕರೊಡನೆ ಅಲ್ಲಿಗೆ ಬಂದು ಬಿಟ್ಟನು. ತನ್ನ ಸೈನಿಕರಿಗೆ, ಮದುಮಗನನ್ನು ಎಳೆದು ತರಲು ಆಜ್ಞಾಪಿಸಿದನು. ಅಷ್ಟರಲ್ಲಿ ಪ್ರಗತಿ ತನ್ನ ಕತ್ತಿ ಯನ್ನು ಎಳೆದು ಅದಕ್ಕೆ ತಾನು ಕಲಿತಿದ್ದ ಮಂತ್ರ ಜಪಿಸಿ, ಮಂತ್ರಶಕ್ತಿ ತುಂಬಿದಳು. ಎಲ್ಲರ ತಲೆಗಳನ್ನೂ ಸೋರೆ ಕಾಯಿಯನ್ನು ತುಂಡರಿಸಿದಂತೆ ಕ್ಷಣಮಾತ್ರದಲ್ಲಿ ತುಂಡರಿಸಿ ದಳು. ಇದನ್ನು ಕಂಡ ರಾಜ ವಿಪರೀತ ಕೋಪದಿಂದ ಅವಳ ಮೇಲೆ ನುಗ್ಗಿಬಂದ. ಆಗ ಪ್ರಗತಿ ಹೆದರದೇ, ರಾಜನ ತಲೆಯನ್ನೂ ಕತ್ತರಿಸಿಬಿಟ್ಟಳು. ಇಷ್ಟೆಲ್ಲಾ ಆಗುವುದರೊ ಳಗೇ ಇಡೀ ಊರಜನರೆಲ್ಲಾ ಅಲ್ಲಿ ಸೇರಿ ಬಿಟ್ಟಿದ್ದರು. ಆ ದೃಶ್ಯವನ್ನು ನೋಡಿದ ಜನರೆಲ್ಲರಿಗೂ ವಿಸ್ಮಯ–ಸಂತೋ ಷಗಳಾದವು. 'ಇನ್ನು ನಮಗೆ ಭಯವಿಲ್ಲ' ಎಂದು ಅತೀವ ಸಂತೋಷದಿಂದ, ನೆಮ್ಮದಿಯಿಂದ ಪ್ರ ಗ ತಿ ಯ ನ್ನು ಕೊಂಡಾಡಿದರು. ಎಲ್ಲರ ಮನೆಯ ಹುಡುಗಿಯರಿಗೆಲ್ಲಾ ಸ್ವಾತಂತ್ರ್ಯಸಿಕ್ಕಿತು.ಅವಳ ಧೈರ್ಯ ಸಾಹಸಗಳನ್ನು ಮೆಚ್ಚಿ, ಇವಳೇ ರಾಜ್ಯದ ರಾಣಿಯಾಗಬೇಕೆಂದು ಬಗೆದು, ಪ್ರಗತಿ ಯನ್ನು ರಾಣಿಯನ್ನಾಗಿ ಮಾಡಿದರು. ಋಷಿದಂಪತಿಗಳು ತಮ್ಮ ಮಗಳಿಗೆ ಈಗ ಸಂತೋಷದಿಂದ ಮದುವೆ ಮಾಡಿ ದರು. ಪ್ರಗತಿ, ತನ್ನ ತಂದೆ ತಾಯ್ಗಳೊಡನೆ, ಗಂಡನೊ ಡನೆ ಬಹುಕಾಲದ ವರೆಗೂ ಒಳ್ಳೆಯ ರಾಣಿಯಾಗಿ ರಾಜ್ಯ ವಾಳಿದಳು.

ಹುಡುಗರೆಲ್ಲಾ ತುಂಬಾ ಹರ್ಷಗೊಂಡು, "ಅಬ್ಬಾ ! ಕಥೆ ಎಷ್ಟು ಚೆನ್ನಾಗಿದೆ. ಅಜ್ಜೀ, ನೀನು ತುಂಬಾ ಚೆನ್ನಾಗಿ ಕಥೆ ಹೇಳ್ತಿ. ನಮ್ಮ ಸ್ಕೂಲು ಬಾಗಿಲು ತೆಗೆಯುವವರೆಗೂ ದಿನಾ ಬ ರ್ತೀ ವಿ. ನೀನು ದಿನಾ ಕಥೆ ಹೇಳು" ಎಂದು ಎಲ್ಲರೂ ತಮ್ಮ ತಮ್ಮ ಮನೆಗೆ ಹೋದರು.

**–ವೇದ**

## ಸತಿ ಕಾನೂನು

1987 ರ ಸೆಪ್ಟೆಂಬರ್ 4 ರಂದು ರಾಜಸ್ಥಾನದ ದೇವರಾಲಾ ಗ್ರಾಮದಲ್ಲಿ ಹದಿನೆಂಟರ ಹರಯದ ರೂಪಾ ಕನ್ವರ್ 'ಸತಿ' ಯಾದ ಪ್ರಕರಣದ ಬಗ್ಗೆ ಮತಾಂಧರು ತೋರಿದ ಬೆಂಬಲ ಹಾಗೂ ರಾಷ್ಟ್ರಾದ್ಯಂತ ವ್ಯಕ್ತವಾದ ಪ್ರತಿಭಟನೆ ಹಿನ್ನೆಲೆಯಲ್ಲಿ ಸಂಸತ್ತು ಹೊಸ ಕಾನೂನೊಂದನ್ನು ಜಾರಿಗೊಳಿಸಿದೆ.

ಆದರೆ 'ಸತಿ' ಆಚರಣೆ ಅಮಾನುಷ್ಯತೆ ಪರಿಗಣಿಸಿದರೆ, ಇದರ ವಿರುದ್ಧ ರೂಪಿಸಲಾಗಿರುವ ಹೊಸ ಕಾನೂನು ತೀರಾ ದುರ್ಬಲ ಎನ್ನುತ್ತಾರೆ ಸುಪ್ರಿಂ ಕೋರ್ಟ್ ಮಾಜಿ ನ್ಯಾಯಾದೀಶ ವಿ. ಆರ್. ಕೃಷ್ಣ ಅಯ್ಯರ್ ಈ ಕಾನೂನಿನಲ್ಲಿ ಈಗಾಗಲೇ ಇರುವ ಸತಿ ದೇವಾಲಯುಗಳ ಪೂಜೆಗೆ ಅವಕಾಶ ನೀಡಲಾಗಿದೆ, ಇದು ಯಥಾಪ್ರಕಾರ ಸತಿ ಆಚರಣೆಯ ವೈಭವೀಕರಣಕ್ಕೆ ಅವಕಾಶ ನೀಡುತ್ತದೆ ಎನ್ನುತ್ತಾರೆ.

ಸತಿ ಆಚರಣೆಗೆ ಕಾರಣವಾಗುವ ಅಪರಾಧಿಗಳನ್ನು ಶಿಕ್ಷಿಸಿಸಲು ಇಂಡಿಯನ್ ಪೀನಲ್ ಕೋಡ್‌ನಲ್ಲಿಸಾಕಷ್ಟು ಅವಕಾಶವಿರುವಾಗ, ಹೊಸ ಕಾನೂನಿನ 'ವಂಚನೆ' ಅಗತ್ಯವಿರಲಿಲ್ಲ ಎಂದಿದ್ದಾರೆ.

## ಮಹಿಳಾ-ಅಧ್ಯಯನ

ಪದವಿ ತರಗತಿಗಳಲ್ಲಿ "ಮಹಿಳಾ ಅಧ್ಯಯನ" ವನ್ನು ಪಠ್ಯ ವಿಷಯವಾಗಿ ಸೇರಿಸಲು ಏಳು ವಿಶ್ವವಿದ್ಯಾನಿಲಯಗಳನ್ನು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ ಗುರುತಿಸಿದೆ.

ಅವು – ದೆಹಲಿ ವಿಶ್ವವಿದ್ಯಾಲಯ, ಬನಾರಸ್ ವಿಶ್ವವಿದ್ಯಾನಿಲಯ, ನಾತ್-ಈಸ್ಟರ್ನ್ ಹಿಲ್ ಯುನಿವರ್ಸಿಟಿ, ದಕ್ಷಿಣ ಗುಜರಾತ ವಿಶ್ವವಿದ್ಯಾನಿಲಯ,ಪುಣೆ ವಿಶ್ವವಿದ್ಯಾನಿಲಯ, ಕೇರಳ ವಿಶ್ವವಿದ್ಯಾನಿಲಯ ಹಾಗೂ ಪಂಜಾಬ್ ವಿಶ್ವವಿದ್ಯಾನಿಲಯ.

"ಮಹಿಳಾ ಅಧ್ಯಯನ ಪಠ್ಯ ವಿಷಯ ಆರಂಭಿಸುವುದಕ್ಕಾಗಿ ಪಂಜಾಬ್ ವಿಶ್ವವಿದಾನಿಲಯಕ್ಕೆ ನಲವತ್ತು ಸಾವಿರ ರೂ. ಗಳನ್ನು ನೀಡಲಾಗಿದೆ.

## ಕನಿಷ್ಠ ವೇತನ

ಮನೆಗೆಲಸದ ಕಾರ್ಮಿಕರಿಗೆ ಕನಿಷ್ಠ ವೇತನ ನಿಗದಿ ಪಡಿಸುವ ಬಗ್ಗೆ ರಾಜ್ಯ ಸರಕಾರ ಪರಿಶೀಲಿಸುತ್ತದೆ.

ಬೆಂಗಳೂರು ನಗರದಲ್ಲಿ 12 ಸಾವಿರ ಮನೆಗೆಲಸದ ಕಾರ್ಮಿಕರಿದ್ದಾರೆ. ಮನೆಗೆಲಸದವರಿಗೆ ಕನಿಷ್ಠ ವೇತನ ನಿಗದಿ ಪಡಿಸುವ ವಿಚಾರ ರಾಷ್ಟ್ರದಲ್ಲೇ ಪ್ರಥಮ ಹೆಜ್ಜೆ. ಸುಮಾರು 70 ಸಾವಿರ ಮನೆಗೆಲಸದ ಕಾರ್ಮಿಕರಿರುವ ಮುಂಬೈನಲ್ಲೇ ಇನ್ನೂ ಈ ಯತ್ನವಾಗಿಲ್ಲ.'

## 'ಭ್ರೂಣ ಪರೀಕ್ಷೆ'

ಭ್ರೂಣ ಲಿಂಗದ ಪತ್ತೆಗಾಗಿ ನೆಡೆಸುವ ಪರೀಕ್ಷೆಗಳನ್ನು ಬಹಿಷ್ಕರಿಸುವ ಮಸೂದೆಯನ್ನು ಈ ಸಂಸತ್ತಿನ ಮುಂದಿನ ಬಜೆಟ್ ಅಧಿವೇಶನದಲ್ಲಿ ಮಂಡಿಸುವುದು. ಹಲವಾರು ಸಾಮಾಜಿಕ ಕಾರಣಗಳಿಂದಾಗಿ ಇನ್ನು ಮುಂದೆ ಭ್ರೂಣ ಲಿಂಗ ಪತ್ತೆ ಪರೀಕ್ಷೆಗಳಿಗೆ ಅವಕಾಶವಿರುವುದಿಲ್ಲ ಎಂದಿದ್ದಾರೆ ಅಖಿಲ ಭಾ ರ ತ ವೈದ್ಯಕೀಯ ವಿ ಜ್ಞಾ ನ ಸಂಸ್ಥೆಯ ಪ್ರೊ. ಐ.ಸಿ.ವರ್ಮಾ.

## ವರದಕ್ಷಿಣೆ – ಐ.ಎ.ಎಸ್. ಅಧಿಕಾರಿ

ಹೆಚ್ಚಿನ ವರದಕ್ಷಿಣೆ ತರಲಿಲ್ಲವೆಂದು ಕಿರುಕುಳ ನೀಡುತ್ತಿದ್ದ ಐ. ಎ. ಎಸ್. ಅಧಿಕಾರಿಯೊಬ್ಬರ ವಿರುದ್ಧ ಆತನ ಪತ್ನಿ ನೀಡಿರುವ ದೂರನ್ನು ಕೇಂದ್ರ ಸರಕಾರ ಪರಿಶೀಲಿಸುತ್ತಿದೆ.

ಅಲ್ಲದೆ, ವಿವಾಹ ಸಂದರ್ಭದಲ್ಲಿ ವರದಕ್ಷಿಣೆ ನೀಡುವುದಿಲ್ಲ. ಅಥವಾ ತೆಗೆದುಕೊಳ್ಳುವುದಿಲ್ಲ ಎಂಬಂತಹ ಮುಚ್ಚಳಿಕೆಯನ್ನು ಗ್ರೂಪ್-ಎ ಸೇವೆಯ ಪ್ರೊಬೇಷನರಿ ಅಧಿಕಾರಿಗಳು ಬರೆದು ಕೊಡಬೇಕು ಎಂಬ ವಿಚಾರ ಕಡ್ಡಾಯ ಮಾಡಲಾಗುವುದು. ವರದಕ್ಷಿಣೆ ಸಾವಿನ ಪ್ರಕರಣಗಳಲ್ಲಿ ಸರಕಾರಿ ನೌಕರ ಆರೋಪಿಯಾಗಿದ್ದಲ್ಲಿ'

ಅಂತಹ ವ್ಯಕ್ತಿಯನ್ನು ಕೂಡಲೇ ಸಸ್ಪೆಂಡ್ ಮಾಡ ಲಾಗುವುದು ಎಂದು ಕಳೆದ ವರ್ಷ ನಡೆದ ರಾಜ್ಯಸಭೆ ಚಳಿಗಾಲದ ಅಧಿವೇಶನದಲ್ಲಿ ತಿಳಿಸಲಾಗಿದೆ.

## ಮಹಿಳಾ-ಮಾರಾಟ

ಧೋಲ್‌ಪುರದ ಬಳಿ ರಾಹ್ರಾಯಿ ಗ್ರಾಮದಲ್ಲಿ ವಿವಾಹಿತ ಮಹಿಳೆಯನ್ನು ಆಕೆಯ ಪತಿ ಮತ್ತು ಮಾವ 30 ಸಾವಿರ ರೂ.ಗಳಿಗೆ ಮಾರಿದಂತಹ ಘಟನೆ ವರದಿಯಾಗಿದೆ. ಸರಮಾರು ಪೋಲಿಸ್ ಠಾಣೆಯಲ್ಲಿ ಮಹಿಳೆಯ ಸೋದರ ಈ ಬಗ್ಗೆ ದೂರು ನೀಡಿದ್ದಾನೆ. 22 ವರ್ಷದ ಮುನ್ನಿಯನ್ನು ಆಕೆಯ ಪತಿ ಪಾನರ್‌ಸಿಂಗ್ ಹಾಗೂ ಮಾವ ಶಿವಚರಣ್, ಅದೇ ಗ್ರಾಮದ ರಾಮ ದಯಾಳಗೆ ಮಾರಾಟ ಮಾಡಿದ್ದಾನೆ ಎಂದು ದೂರಲಾಗಿದೆ.

## ಪತ್ನಿಯ ಮೇಲೆ ಅತ್ಯಾಚಾರ

ಸತತವಾಗಿ ಏಳು ವರ್ಷಗಳ ಕಾಲ ಪತ್ನಿಯ ಮೇಲೆ ಅತ್ಯಾಚಾರವೆಸಗಿದ ಆರೋಪಕ್ಕೆ ಗುರಿಯಾಗಿದ್ದ ಪತಿಯನ್ನು ತಪ್ಪಿತಸ್ಥನೆಂದು ಜಮ್ಮುವಿನ ನ್ಯಾಯಾಲಯ ಘೋಷಿಸಿದೆ.

ಇಂತಹ ತೀರ್ಪು ಹೊರಬಿದ್ದಿರುವುದು ಜಮ್ಮುವಿನ ಇತಿಹಾಸದಲ್ಲೇ ಮೊದಲನೆಯದು, ವಿವಾಹ ವಿಚ್ಛೇದನ ಪಡೆದಿದ್ದ ವಿಷಯವನ್ನು ಪತ್ನಿಯಿಂದ ಮುಚ್ಚಿಟ್ಟು ಆಕೆಯೊಡನೆ ಲೈಂಗಿಕ ಸಂಬಂಧವನ್ನು ಏಳು ವರ್ಷಗಳ ಕಾಲ ಮುಂದುವರೆಸಿದನೆಂದು ಎರಡನೇ ಅಡಿಷನಲ್ ಸೆಷನ್ಸ್ ನ್ಯಾಯಾಧೀಶ ಬಿ.ಡಿ. ನಾಯರ್ ತಿಳಿಸಿದ್ದಾರೆ.

ವಿಚ್ಛೇದನ ಒಪ್ಪಂದ ಜಾರಿಯಾದ ತಕ್ಷಣವೇ ಗಂಡ ಹೆಂಡಿರ ಮಧ್ಯದ ಲೈಂಗಿಕ ಸಂಬಂಧ ಅಪರಾಧವಾಗುತ್ತದೆ ಎಂದು ಭಾರತ ಸಂವಿಧಾನ, ಮಹ್ಮಮದೀಯ ಕಾನೂನು ಹಾಗೂ ವಿವಿಧ ಹೈಕೋರ್ಟ್ ಅಧಿಕಾರಿಗಳು ಉಲ್ಲೇಖಿಸಿದ್ದಾರೆ.

### ಇಪ್ಪತ್ತು ವರ್ಷಗಳ ಹಿಂದೆ

ಪಾಘ್‌ಖತ್ ಬೀಬಿ ನಜೀರ್ ಅಹಮದ್‌ನನ್ನು ವಿವಾಹವಾದಳು. ನಂತರ ಆಕೆಗೆ ಗೊತ್ತಿಲ್ಲದಂತೇ ವಿವಾಹ ವಿಚ್ಛೇದನ 'ತಲಾಖ್‌ನ್ನು' ಪಡೆದನು. ಇಬ್ಬರು ಸಾಕ್ಷಿಗಳ ಎದುರಲ್ಲಿ 1978ರ ಫೆಬ್ರುವರಿ 10 ರಂದು ಆಖ್‌ನೂರ್‌ನ ಸಬ್-ರಿಜಿಸ್ಟ್ರಾರ್ ನ್ಯಾಯಾಲಯದಲ್ಲಿ ಇದು ದಾಖಲಾಗಿದೆ. ಆದರೂ ಪಾಘ್‌ಖತ್ ಬೀಬಿಯೋಷನೆ ಲೈಂಗಿಕ ಸಂಬಂಧ ಮುಂದುವರೆಸಿದನು.

ಆದರೆ ಸ್ವಲ್ಪ ಸಮಯದ ಹಿಂದೆ ಆಕೆ ಕಾಯಿಲೆ ಬಿದ್ದಾಗ ಮನೆಯಿಂದ ಓಡಿಸಿದ, ಆಗ ಪಾಘ್‌ಖತ್ ಬೀಬಿ ಜೀವನಾಂಶಕ್ಕಾಗಿ ಜುಡಿಷಿಯಲ್ ಮ್ಯಾಜೀಸ್ಟ್ರೇಟ್ ನ್ಯಾಯಾಲದಲ್ಲಿ ಅರ್ಜಿ ಸಲ್ಲಿಸಿದಳು. ಆಗಷ್ಟೆ ನಜೀರ ವಿವಾಹ ವಿಚ್ಛೇದನ ಪಡೆದಿರುವ ವಿಚಾರ ತಿಳಿಸಿದ.

ನಜೀರ್ ಹಾಗೂ ಪಾಘ್‌ಖತ್ ಮಧ್ಯದ ಲೈಂಗಿಕ ಸಂಬಂಧ ಪರಸ್ಪರ ಒಪ್ಪಿಗೆಯಿಂದಾಗಿದ್ದರೂ, ಇಂತಹ ಒಪ್ಪಿಗೆಯನ್ನು ವಂಚನೆಯ ಮೂಲಕ ಆರೋಪಿ ಪಡೆದಿದ್ದಾನೆ ಎಂದು ನ್ಯಾಯಾಧೀಶರು ತಿಳಿಸಿದ್ದಾರೆ.

## ದೇವದಾಸಿಗೆ ಏಯ್ಡ್ಸ್

ಏಯ್ಡ್ಸ್ ಕಾಯಿಲೆಯಿಂದ ನರುಳುತ್ತಿರುವ 26 ವರ್ಷದ ದೇವದಾಸಿಯೊಬ್ಬಳು ಬೆಳಗಾವಿ ಜಿಲ್ಲಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಳೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ವೇಶ್ಯೆಯರ ಸಮೀಕ್ಷೆ ನಡೆಸಲು ರಾಜ್ಯಸರಕಾರ ಆರೋಗ್ಯ ಇಲಾಖೆ ಯೋಜಿಸಿದೆ. ಅಲ್ಲದೆ ಏಯ್ಡ್ಸ್ ರೋಗ ಪತ್ತೆ ಹಾಗೂ ಕಾಯಿಲೆಗೆ ಸಂಬಂಧಿಸಿದಂತೆ ಶಿಕ್ಷಣ ನೀಡುವುದಕ್ಕಾಗಿ 'ಏಯ್ಡ್ಸ್ ಕೇಂದ್ರ' ವೊಂದನ್ನೂ ಸ್ಥಾಪಿಸಲು ಯೋಜಿಸಲಾಗಿದೆ.

## ಕೌಟುಂಬಿಕ ಸಲಹಾ ಕೇಂದ್ರ

ಮಹಿಳೆಯರು ತಮ್ಮ ಕೌಟುಂಬಿಕ ಸಮಸ್ಯೆಗಳನ್ನು ನ್ಯಾಯಾಲಯಕ್ಕೆ ಹೋಗದೆ ಸಲಹೆ ಮಾರ್ಗದರ್ಶನದಿಂದ ಪರಿಹರಿಸಿಕೊಳ್ಳಲು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಎರಡು ಕೌಟುಂಬಿಕ ಸಲಹಾ ಕೇಂದ್ರಗಳನ್ನು ಸ್ಥಾಪಿಸಲು ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಲಿ ನಿರ್ಧರಿಸಿದೆ.

ಈ ಕೇಂದ್ರಗಳನ್ನು ಸ್ವಯಂಸೇವಾ ಕ್ರಿಯಾಸಮಿತಿ ನೆರವಿನಿಂದ ಸ್ಥಾಪಿಸಲಾಗುವುದು. ಇದರಲ್ಲಿ ಗೃಹ ಇಲಾಖೆ ಸಮಾಜ ಕಲ್ಯಾಣ ಇಲಾಖೆ ಹಾಗೂ ಸ್ವಯಂಸೇವಾ ಕ್ರಿಯಾಸಮಿತಿಗಳ ಪ್ರತಿನಿಧಿಗಳು ಸದಸ್ಯರಾಗಿರುತ್ತಾರೆ.

## ಮಾಯಾ ತ್ಯಾಗಿ : ನ್ಯಾಯದ ನೋವು

ಜೂನ್ 18, 1980-ಅಂದು ಉತ್ತರ ಪ್ರದೇಶದ ಬಾಗಪತ್ ಬಜಾರಿನಲ್ಲಿ ಮಾಯಾ ತ್ಯಾಗಿಯನ್ನು ನೂರಾರು ಜನರ ಎದುರಿಗೆ ಬೆತ್ತಲಾಗಿಸಲಾಯಿತು. ಆಕೆಯ ಜತೆಗಿದ್ದ ಪತಿ ಈಶ್ವರ ತ್ಯಾಗಿ ಸೇರಿದಂತೆ ಮೂವರ ಕೊಲೆ ಮಾಡಲಾಯಿತು. ಈ ಕೃತ್ಯವೆಸಗಿದವರು ಕಾನೂನು ರಕ್ಷಕರಾದ ಪೊಲೀಸರು. ನಂತರ ಆಕೆಯನ್ನು ಬೆತ್ತಲಾಗಿಯೇ ಮೆರವಣಿಗೆ ಮಾಡಿಕೊಂಡು ಪೊಲೀಸ್ ಠಾಣೆಗೆ ಕರೆದೊಯ್ದು ಅತ್ಯಾಚಾರ ಎಸಗಲಾಯಿತು.

ಘಟನೆ ನಡೆದು ಈಗ ಎಂಟು ವರ್ಷಗಳಾಗಿವೆ. ಈ ಭೀಕರ ಕೃತ್ಯದ ಅಪರಾಧಿಗಳಿಗೆ, ತಡವಾಗಿಯಾದರೂ ನ್ಯಾಯಾಲಯ ಮರಣ ದಂಡನೆ ಶಿಕ್ಷೆ ವಿಧಿಸಿ ನ್ಯಾಯಾಲಯದ ಘನತೆ ಎತ್ತಿ ಹಿಡಿದಿದೆ.

1988ರ ಜನವರಿ 23ರಂದು ಬುಲಾಂದ್‌ಶಹರ್‌ನ ಅಡಿಷನಲ್ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶ ವಿಷ್ಣುದತ್ ದುಬೆ ಅವರು. ಘಟನೆಗೆ ಕಾರಣರಾದ ಆರು ಪೊಲೀಸ್ ಅಧಿಕಾರಿಗಳಿಗೆ ಮರಣ ದಂಡನೆ ಹಾಗೂ ಉಳಿದ ನಾಲ್ವರಿಗೆ ಜೀವಾವಧಿ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದಾರೆ.

"ಸಮಾಜದ ಉಳಿವಿಗೆ ಇಂತಹ ಪಿಡುಗುಗಳನ್ನೂ ಶಾಶ್ವತವಾಗಿ ನಾಶಗೊಳಿಸುವುದು ಅಗತ್ಯ.....ಈ ಪ್ರಕರಣ ಅಪರೂಪದಲ್ಲಿ ಅಪರೂಪದ್ದು. ಅಪರಾಧಿಗೆ ಮರಣ ದಂಡನೆಯಂತಹ ಉಗ್ರ ಶಿಕ್ಷೆಯೊಂದೇ ಮಾರ್ಗ" ಎಂದು ನ್ಯಾಯಾಧೀಶರು ಅಭಿಪ್ರಾಯ ಪಟ್ಟಿದ್ದಾರೆ.

ಈ ಚರಿತ್ರಾರ್ಹ ತೀರ್ಪು ಪ್ರಕಟವಾದ ಕೂಡಲೇ, ಉತ್ತರ ಪ್ರದೇಶದ ಗೃಹ ಸಚಿವ ಗೋಪಿನಾಥ ದೀಕ್ಷಿತ್ ಅವರು, ಈ ತೀರ್ಪಿನ ವಿರುದ್ಧ ಹೈಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸುವುದಾಗಿ ಸ್ಥಳೀಯ ಪತ್ರಿಕೆಗಳಲ್ಲಿ ಹೇಳಿಕೆ ನೀಡಿದರು. ಜನವರಿ 28 ರಂದು, ಜೀವಾವಧಿ ಶಿಕ್ಷೆಗೆ ಗುರಿಯಾಗಿದ್ದ ನಾಲ್ಕು ಜನರನ್ನೂ ಅಲಹಾಬಾದ್ ಹೈಕೋರ್ಟ್ ಜಾಮೀನಿನ ಮೇಲೆ ಬಿಡುಗಡೆ ಮಾಡಿದೆ.

ಘಟನೆಗೆ ಕಾರಣನಾದ ಸಬ್‌ಇನ್ಸ್‌ಪೆಕ್ಟರ್ ನರೇಂದ್ರ ಸಿಂಗ್ (ಈತನನ್ನು ಮಾಯಾಳ ಮೈದುನ ಸೇಡಿಗಾಗಿ ನಂತರ ಕೊಲೆ ಮಾಡಿದ)ನ ಕುಕೃತ್ಯಗಳನ್ನು ದುಬೆ ಅವರ ತೀರ್ಪು ವಿವರವಾಗಿ ವಿವರಿಸಿದೆ. ಆದರೆ ಬಾಗಪತ್ ಪೊಲೀಸ್ ಠಾಣೆಯ ಎಸ್. ಎಚ್, ಓ ಡಿ. ಪಿ. ಗೌರ್ ಅವರ ಪಾತ್ರವನ್ನು ಸುಮ್ಮನೆ ಹೆಸರಿಸಿದೆ. ಬುಲಂದ್ ಶಹರ್ ನ್ಯಾಯಾಲಯದಲ್ಲಿ 1985ರ ಸೆಪ್ಟೆಂಬರ್ 30 ರಂದು ವಿಚಾರಣೆ ಸಂದರ್ಭದಲ್ಲಿ. "ಪೊಲೀಸ್ ಠಾಣೆ ಒಳಗೆ ತನ್ನ ಮೇಲೆ ಹಲ್ಲೆ ನಡೆಸಿದವರಲ್ಲಿ ಗೌರ್ ಸಹ ಒಬ್ಬ ಆದರೂ ಆತನನ್ನು ಹಾಜರು ಪಡಿಸಿಲ್ಲ" ಎಂದು ಮಾಯಾತ್ಯಾಗಿ ತಿಳಿಸಿದ್ದಾಳೆ.

ಘಟನೆ ನಡೆದು ಒಂದು ವಾರವಾದರೂ ಸ್ಥಳೀಯ ಪೊಲೀಸರು ಯಾವ ಕ್ರಮವನ್ನೂ ಕೈಗೊಳ್ಳದಿದ್ದಾಗ, ತನಿಖೆಯನ್ನು ಸಿಐಡಿಗೆ ಒಪ್ಪಿಸುವ ಆದೇಶವನ್ನು 1980ರ ಜೂನ್ 24 ರಂದು ನೀಡಲಾಯಿತು. ಹತ್ತು ಮಂದಿ ಆರೋಪಿಗಳ ವಿರುದ್ಧ ಮೊಕದ್ದಮೆ ಹೂಡಲು ವಿಚಾರಣಾ ಅಧಿಕಾರಿ ಎಸ್. ಪಿ. ಪಾಂಡೆ ಅವರಿಗೆ 1981ರ ಜನವರಿ 13ರಂದು ಅನುಮತಿ ನೀಡಲಾಯಿತು, ಮಾಯಾಳ ಮೈದುನನಿಂದ ಸಬ್‌ಇನ್ಸ್‌ಪೆಕ್ಟರ್ ನರೇಂದ್ರ ಸಿಂಗ್ ಈಗಾಗಲೇ ಕೊಲೆಯಾಗಿದ್ದ. ಆದರೆ ಘಟನೆಗೆ ಕಾರಣನಾದ ಹನ್ನೆರಡನೇ ವ್ಯಕ್ತಿ ಗೌರ್ ವಿರುದ್ಧ ಮೊಕದ್ದಮೆ ಹೂಡಲು ಅವಕಾಶವೇ ನೀಡಲಿಲ್ಲ.

1985ರ ಸೆಪ್ಟೆಂಬರ್ 20 ಹಾಗೂ ಅಕ್ಟೋಬರ್ 28 ರಂದು ನ್ಯಾಯಾಲಯದಲ್ಲಿ ಮಾಯಾಳ ಹೇಳಿಕೆ ಆಧರಿಸಿ 1986ರ ಏಪ್ರಿಲ್ 3 ರಂದು ನ್ಯಾಯಾಲಯಕ್ಕೆ ಗೌರ್‌ನನ್ನೂ ಕರೆಸಲಾಗಿತ್ತು. ಆದರೆ ತನ್ನ ವಿರುದ್ಧ ಮೊ ದ್ದಮೆ ಹೂಡಲು 1981 ರಲ್ಲೇ ಸಿಐಡಿ ಅವಕಾಶ ನೀಡಿಲ್ಲದ್ದರಿಂದ, ಸೆಷನ್ ಕೋರ್ಟ್ ಆದೇಶಕ್ಕೆ ತಡೆ ನೀಡಬೇಕೆಂದು ಹೈಕೋರ್ಟ್‌ಗೆ ಗೌರ್ ಮೇಲ್ಮನವಿ ಸಲ್ಲಿಸಿದರು. ಇದನ್ನು ಪುರಸ್ಕರಿಸಿದ ಹೈಕೋರ್ಟ್ ಸೆಷನ್ಸ್ ಕೋರ್ಟ್ ಆದೇಶಕ್ಕೆ ತಡೆ ನೀಡಿತು.

ಇಂದು, ಯಾವ ಶಿಕ್ಷೆಯ ಭಯವೂ ಇಲ್ಲದೆ ಗೌರ್ ಸ್ವಚ್ಛಂದವಾಗಿ ವಿಹರಿಸಿಕೊಂಡಿದ್ದಾನೆ. ಆದರೆ ಆರು ತಿಂಗಳ ಹಿಂದೆ ಬರೈಲಿಯಲ್ಲಿ ಮಹಿಳೆಯೊಬ್ಬಳ ಮೇಲೆ ಅತ್ಯಾಚಾರ ನಡೆಸಿದ ಆರೋಪದ ಮೇಲೆ ಈತನನ್ನು ಪೊಲೀಸ್ ಪಡೆಯಿಂದ ಸಸ್ಪೆಂಡ್ ಮಾಡಲಾಗಿದೆ ಎಂದೂ ಜನ ಹೇಳುತ್ತಾರೆ.

ಘಟನೆ ನಡೆದಾಗ ಐದು ತಿಂಗಳ ಗರ್ಭಿಣಿಯಾಗಿದ್ದ ಮಾಯಾ ತ್ಯಾಗಿ ನಂತರ ಗಂಡು ಮಗುವಿಗೆ ಜನ್ಮ ನೀಡಿದಳು. ದೀಪಕ್ ಹೆಸರಿನ ಈ ಮಗುವನ್ನೂ ಕೊಲ್ಲಬಹುದೆಂಬ ಭೀತಿಯಿಂದ ಬಂಧುಗಳ ಬಳಿಗೆ ಮಗುವನ್ನು ಕಳಿಸಿದ್ದಳು.

ನ್ಯಾಯಾಲಯದ ವಿಚಾರಣೆ ಸಂದರ್ಭದಲ್ಲಿ ಮಾಯಾತ್ಯಾಗಿ ಈ ದುರ್ಘಟನೆಯನ್ನು ವಿವರವಾಗಿ ವಿವರಿಸಿದ್ದಾಳೆ.

"ಮಾಯಾಳ ಸ್ವಗ್ರಾಮ ಸಂಕಲಪಲ್ಲಿಯಲ್ಲಿ ನಡೆಯಬೇಕಿದ್ದ ಬಂಧುವೊಬ್ಬರ ವಿವಾಹಕ್ಕಾಗಿ ಮಾಯಾ, ಆಕೆಯ ಪತಿ ಹಾಗೂ ಇನ್ನಿಬ್ಬರು ಬಂಧುಗಳು ಕಾರಿನಲ್ಲಿ ಹೊರಟಿದ್ದರು. ಮಾರ್ಗ ಮಧ್ಯದಲ್ಲಿ ಕಾರು ಕೆಟ್ಟಿತು. ಬಾಗ್‌ಪತ್‌ನಲ್ಲಿ ಮಾತ್ರ, ಕಾರಿನ ಟೈರು ರಿಪೇರಿ ಸಾಧ್ಯವಿತ್ತು. ಟೈರು ರಿಪೇರಿಗಾಗಿ ಕಾಯುತ್ತಿದ್ದಾಗ, ಮಫ್ತಿಯಲ್ಲಿದ್ದ ಇಬ್ಬರು ಪೋಲೀಸರು ಮಾಯಾಳ ಬಳಿ ಬಂದು ಅಶ್ಲೀಲ ಮಾತುಗಳನ್ನಾಡಿದರು. ಕೆರಳಿದ ಪತಿ ಜಗಳ ಆರಂಭಿಸಿದ. ಇಬ್ಬರು ಪೋಲೀಸರು ಹೊರಟು ಹೋದರು. ಆದರೆ ಮತ್ತೆ ತಕ್ಷಣವೇ ಹಿಂದಿರುಗಿ ಆಕೆಯ ಪತಿ ಮತ್ತಿಬ್ಬರು ಬಂಧುಗಳಿಗೆ ಗುಂಡಿಕ್ಕಿ ಕೊಂದರು. ನಂತರ ಸಮವಸ್ತ್ರ ಧರಿಸಿದ್ದ ಕೆಲವು ಪೋಲೀಸರು ಮಾಯಾಳನ್ನು ಕಾರಿನಿಂದ ಹೊರಗೆ ಎಳೆದು ಥಳಿಸಿದರು. ಮಾಯಾ ಸಹಾಯಕ್ಕಾಗಿ ಕಿರುಚಿತ್ತಿದ್ದಾಗಲೇ ಅವಳ ಬಟ್ಟೆಗಳನ್ನೆಲ್ಲಾ ಕಿತ್ತೆಸೆದರು. ಈ ಸ್ಥಿತಿಯಲ್ಲೇ ಮೆರವಣಿಗೆ ಮಾಡಿಕೊಂಡು ಪೋಲೀಸ್ ಠಾಣೆಗೆ ಕರೆದೊಯ್ದರು. ದಾರಿಯಲ್ಲಿ ಒಬ್ಬ ವ್ಯಕ್ತಿ ಮಾಯಾಳೆಡೆ ಟವೆಲ್ ಎಸೆದಾಗ, ಅದು ಮಾಯಾಳಿಗೆ ಸಿಗದಂತೆ ಮಧ್ಯದಲ್ಲೇ ಪೋಲಿಸರು ತಡೆದರು."

ಇಂತಹ ಭೀಕರ ಅನುಭವದ ನೋವಿನಿಂದ ಇನ್ನು ಚೇತರಿಸಿಕೊಂಡಿರದ ಮಾಯಾತ್ಯಾಗಿ ಈಗ ಮೀರತ್‌ಗೆ ಸುಮಾರು 20 ಕಿ. ಮೀ. ದೂರವಿರುವ ತಿಲ್ ಹೆಟ್ಟಾ ಗ್ರಾಮದಲ್ಲಿರುವ ಅತ್ತೆ ಮನೆಯಲ್ಲಿದ್ದಾಳೆ.

"ತೀರ್ಪಿನ ಬಗ್ಗೆ ಏನು ಹೇಳಲಿ? ಅವರಿಗೆ ಮರಣದಂಡನೆ ವಿಧಿಸಿರುವುದು ಒಳ್ಳೆಯದೇ ಏನೊ" ಅವರು ನನಗೆ ಮಾಡಿದುದನ್ನು ನೆನಸಿಕೊಂಡರೆ. ಅದಕ್ಕೆ ಅವರು ಅರ್ಹರು ಎನಿಸುತ್ತದೆ" ಎನ್ನುತ್ತಲೇ ಬಿಕ್ಕಳಿಸುತ್ತಾಳೆ. ಆಕೆಯ ರೋದನ ಮೂಕವಾದುದು. ಎಂಟು ವರ್ಷಗಳ ತರುವಾಯವೂ, ಮಾಸದ ಆ ಭೀಕರ ನೆನಪು ಮಾಯಾತ್ಯಾಗಿಯನ್ನು ಕಾಡುತ್ತಲೇ ಇದೆ.

—0—

# ಮಾನವಿ

- ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.
- ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.
- ಮಹಿಳೆಯರೊಂದಿಗೆ ಆತ್ಮೀಯ, ಅರ್ಥಪೂರ್ಣ ಸಂವಾದಕ್ಕಾಗಿ.
- ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಲಿಕ್ಕಾಗಿ.

ವಿಳಾಸ : ''ಮಾನವಿ''
ನಂ. 6555/2-ಎಲ್. ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯ ರಸ್ತೆ,
ಮಾರುತಿ ಸೇವಾನಗರ ಅಂಚೆ
ಬೆಂಗಳೂರು - 560 033.

ಸೂಚನೆ : ವಾರ್ಷಿಕ ಚಂದಾ : **15 ರೂ.**
ಆಜೀವ ಚಂದಾ : **250 ರೂ.**
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ವಿಳು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್,
ಎಂ. ಓ. ಮೂಲಕ
ಸ್ವಿಕರಿಸಲಾಗುವುದು.